ಕನ್ನಡ ಕವಿಕಾವ್ಯಮಾಲೆ—೩

# ಚಂಡಶಾಸನ ಕಥಾಸಂಗ್ರಹದ ವಿವರಣೆ

ಲೇಖಕರು

ಎಚ್. ಎಂ. ಶಂಕರನಾರಾಯಣರಾವ್, ಎಂ.ಎ.

*Head of the Department of Kannada*
*Sharada Vilas College, Mysore.*

ಶಾರದಾ ಮಂದಿರ
೫೭೮ ಕೃಷ್ಣರಾಜ ವನಂ
ಮೈಸೂರು

# ಮುನ್ನುಡಿ

ಕವಿಚಕ್ರವರ್ತಿ ಜನ್ನನು ರಚಿಸಿರುವ ಯಶೋಧರಚರಿತ್ರೆಯನ್ನು ಓದಿದವರು, ಅವನ ಇನ್ನೊಂದು ಕೃತಿಯಾದ ಅನಂತನಾಥ ಪುರಾಣದ ಕೊನೆಯಲ್ಲಿ ಬರುವ ಚಂಡಶಾಸನನ ಕಥೆಯನ್ನು ಓದಲೇಬೇಕು. ಏಕೆಂದರೆ ಈ ಎರಡು ಗ್ರಂಥಗಳು ಒಂದಕ್ಕೊಂದು ಪೂರಕವಾದುವು. ಯಶೋಧರಚರಿತ್ರೆಯಲ್ಲಿ ಹೆಣ್ಣಿನಿಂದ ಗಂಡಿಗೆ ಅನ್ಯಾಯವಾದರೆ, ಚಂಡಶಾಸನನ ಕಥೆಯಲ್ಲಿ ಗಂಡಿನಿಂದ ಹೆಣ್ಣಿಗೆ ಅನ್ಯಾಯವಾಗಿದೆ. ಅಷ್ಟೇ ಅಲ್ಲ; ಹೆಣ್ಣಿನ ಹಂಬಲಕ್ಕಾಗಿ ಗಂಡಸು ಪ್ರಾಣಾರ್ಪಣಮಾಡುವವರೆಗೂ ಹೋಗಬಲ್ಲನೆಂಬುದನ್ನು ಚಂಡಶಾಸನನ ಕಥೆ ಚಿತ್ರಿಸುತ್ತದೆ. ಈ ಎರಡು ಗ್ರಂಥಗಳೂ ಒಂದು ಸಮಸ್ಯೆಯ ಎರಡು ಮುಖಗಳನ್ನು ಚಿತ್ರಿಸುತ್ತವೆ. ಕಳೆದ ವರ್ಷ ಯಶೋಧರಚರಿತ್ರೆಯ ಸಂಗ್ರಹಕ್ಕೆ ವಿವರಣೆಯನ್ನು ಬರೆಯಲಾಗಿತ್ತು. ಈಗ ಚಂಡಶಾಸನ ಕಥಾಸಂಗ್ರಹಕ್ಕೆ ವಿವರಣೆಯನ್ನು ಬರೆಯಲಾಗಿದೆ. ಈ ವಿವರಣೆ ಸಾಮಾನ್ಯರಿಗೆ ವಿದ್ವಾಂಸರಿಗಲ್ಲ ಎಂಬ ಅಂಶವನ್ನು ಮಾತ್ರ ತಿಳಿಸ ಬಯಸುತ್ತೇನೆ.

ಯಶೋಧರ ಚರಿತ್ರೆ ಅಹಿಂಸಾತತ್ವವನ್ನು ಬೋಧಿಸ ಹೊರಟ ಚಿಕ್ಕಕಾವ್ಯವಾದರೆ, ಅನಂತನಾಥಪುರಾಣ ಹದಿನಾಲ್ಕನೆಯ ತೀರ್ಥಂಕರನ ಚರಿತ್ರೆಯನ್ನು ವರ್ಣಿಸುವ ಹದಿನೆಂಟುವರ್ಣನೆಗಳನ್ನುಳ್ಳ ಮಹಾಕಾವ್ಯ. ಈ ಕಾವ್ಯದ ಕೊನೆಯಲ್ಲಿ ಚಂಡಶಾಸನನ ವೃತ್ತಾಂತ ಬರುತ್ತದೆಂದು ಮೇಲೆ ಹೇಳಿತಷ್ಟೆ. ಅನಂತನಾಥಜಿನನ ಸಮವಸರಣ ಮಂಟಪಕ್ಕೆ ಸುಪ್ರಭನೆಂಬ ನಾಲ್ಕನೆಯ ಬಲದೇವನು ಬಂದು ದೇವರದೇವನಾದ ಅನಂತನಾಥತೀರ್ಥಂಕರನನ್ನು ನಾನಾವಿಧವಾದ ಅರ್ಚನೆಯಿಂದ ಪೂಜಿಸಿದನು. ಆ ಬಳಿಕ ಅಲ್ಲಿದ್ದ ಜಯನಾಥರೆಂಬ ಗಣಧರರನ್ನು ಕುರಿತು ತನ್ನ ಮತ್ತು ತನ್ನ ಒಡಹುಟ್ಟಿದ ನಾಲ್ಕನೆಯ ವಾಸುದೇವನೆನಿಸಿದ ಪುರುಷೋತ್ತಮನ ಪೂರ್ವವೃತ್ತಾಂತವನ್ನು ತಿಳಿಸಬೇಕೆಂದು ಕೇಳಿದನು. ಆ ಗಣಧರರು ಸುಪ್ರಭನಿಗೆ ಹೇಳಿದ ಕಥೆಯನ್ನು ಕೇಳಿದ ಮದನಪತಾಕೆಯೆಂಬ ಖೇಚರಾಂಗನೆ ಅದನ್ನು ತನ್ನ ತಂಗೆಯಾದ ಚಿತ್ರ

ಲತೆಗೆ ವರ್ಣಿಸಿದಳು. ಆ ಕಥಾಸಂಗ್ರಹವೇ 'ಚಂಡಶಾಸನ ಕಥಾ ಸಂಗ್ರಹ.' ಅದರ ವಿವರಣೆ ಇದು.

ಜನ್ನನು ಪಂಡಿತಕವಿ. ಒಮ್ಮೊಮ್ಮೆ ಅವನ ಪಾಂಡಿತ್ಯ ಕಾವ್ಯಕ್ಕೆ ಹೊರೆಯಾಗುತ್ತದೆ. ಯಶೋಧರ ಚರಿತ್ರೆಯ ಅವನ ತಿಳಿಯಾದ ಶೈಲಿ ಅನಂತನಾಥಪುರಾಣದಲ್ಲಿ ಸಂಸ್ಕೃತಪದಗಳಿಂದ ಕೂಡಿ ಅರ್ಥ ಮಾಡಿಕೊಳ್ಳಲು ಕಷ್ಟವಾಗುತ್ತದೆ. ಯಶೋಧರ ಚರಿತ್ರೆಯನ್ನೋದಿ ಆ ಬಳಿಕ ಚಂಡಶಾಸನನ ಕಥೆಯನ್ನೋದಿದರೆ ಈ ಅಂಶ ಸ್ಫುಟವಾಗುತ್ತದೆ. ಕಥೆ ಸುಲಭವಾಗಿ ಮತ್ತೊಬ್ಬರ ಸಹಾಯವಿಲ್ಲದೆ ಅರ್ಥವಾಗಲು ಸಾಕಷ್ಟು ಸಹಾಯವನ್ನು ಇಲ್ಲಿ ಕಲ್ಪಿಸಿದೆ. ಅನುಬಂಧದಲ್ಲಿ ಕೊಟ್ಟಿರುವ ಅಂಶಗಳಿಂದ ಕಾವ್ಯದ ಪೂರ್ಣರಸಾಸ್ವಾದನೆಗೆ ಅನುಕೂಲವಾಗುವುದೆಂದು ನಾನು ನಂಬುತ್ತೇನೆ. ವಿವರಣೆಯಲ್ಲಿ ಅಲ್ಲಲ್ಲೇ ವಿಮರ್ಶೆಯನ್ನು ಸೇರಿಸಿದೆ. ಈ ವಿಷಯದಲ್ಲಿ ನನಗೆ ಬಂದ ಸಂಶಯಗಳನ್ನು ನಿವಾರಿಸಿದ ನನ್ನ ಪ್ರಿಯಗುರುಗಳಾದ ಪ್ರೊ. ಡಿ. ಎಲ್. ನರಸಿಂಹಚಾರ್, ಎಂ.ಎ., ಅವರಿಗೂ, ಹಿರಿಯ ಮಿತ್ರರಾದ ಪ್ರೊ. ಕೆ. ವಿ. ರಾಘವಾಚಾರ್, ಎಂ.ಎ. ಬಿ.ಟಿ., ಅವರಿಗೂ ನನ್ನ ವಂದನೆಗಳು. ಇದರಲ್ಲಿರಬಹುದಾದ ಗುಣಗಳಿಗೆ ಅವರು ಹೊಣೆಯಲ್ಲದೆ ದೋಷಗಳಿಗಲ್ಲ. ಹಳಗನ್ನಡದ ಈ ತೆರನಾದ ಗ್ರಂಥಗಳಿಗೆ ವಿವರಣೆಗಳನ್ನು ಬರೆದರೆ ಅವುಗಳನ್ನು ಕಡೆಗಣ್ಣಿನಿಂದ ನೋಡುವ, ಕುಹಕದ ಮಾತುಗಳನ್ನಾಡುವ ಜನ ನಮ್ಮಲ್ಲುಂಟು. ಆದರೆ ಈ ತೆರನಾದ ಗ್ರಂಥಗಳು ಬೇಡವೇ, ಅವುಗಳನ್ನು ಬರೆದರೆ ತಪ್ಪೇ ಎಂಬ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳಬೇಕು. ಈ ಕೆಲಸಗಳಲ್ಲಿ ಲೇಖಕನ ಶ್ರದ್ಧೆ ಮುಖ್ಯ. ಇನ್ನಾರಿಗೂ ಇದರಿಂದ ಉಪಯೋಗವೆನಿಸದಿದ್ದರೂ ಅದನ್ನು ಬರೆಯುವವನು ನಾಲ್ಕಾರು ಗ್ರಂಥಗಳನ್ನು ನೋಡಬೇಕಾಗುತ್ತದೆ. ಅಷ್ಟರಮಟ್ಟಿಗಾದರೂ ಲೇಖಕನ ಮನಸ್ಸು ಸಂಸ್ಕಾರಗೊಳ್ಳುತ್ತದೆ. ಈ ವಿವರಣೆಯನ್ನು ಬರೆಯುವಾಗ ದೊರಕಬಹುದಾದ ಸಹಾಯವನ್ನೆಲ್ಲ ಉಪಯೋಗಿಸಿಕೊಂಡಿದೆ. ಶ್ರದ್ಧೆಯಿಂದ ಮಾಡಿದ ಈ ಕೆಲಸದಲ್ಲಿರಬಹುದಾದ ತಪ್ಪುಗಳನ್ನು ಬಲ್ಲವರು ಮನ್ನಿಸಬೇಕು. ಅವು

ಗಳನ್ನು ತಿಳಿಸಿಕೊಟ್ಟಲ್ಲಿ ಮುಂದಿನ ಮುದ್ರಣಕ್ಕೆ ಅವನ್ನು ನೇರ್ಪಡಿಸು ತ್ತೇನೆ. ‘ ನಡೆವರೆಡಹದೆ ಕುಳಿತರೆಡಹುವರೇ ? ’

ನನ್ನ ಪ್ರಿಯಗುರುಗಳಾದ ಪ್ರೊ. ತೀ. ನಂ. ಶ್ರೀಕಂಠಯ್ಯನವರು ರಚಿಸಿರುವ ಕಾವ್ಯ ಸಮೀಕ್ಷೆಯಲ್ಲಿ ಬಂದಿರುವ ‘ ಜನ್ನನ ಕಾವ್ಯಗಳಲ್ಲಿ ಪ್ರಣಯ ನಿರೂಪಣೆ ’ ಎಂಬ ಉತ್ಕೃಷ್ಟ ಲೇಖನವನ್ನು ಓದಬೇಕೆಂದು ವಾಚಕರಲ್ಲಿ ಬಿನ್ನೈಸಿಕೊಳ್ಳುತ್ತೇನೆ.

ನನ್ನ ಇತರ ವಿವರಣೆಗಳಿಗೆ ತೋರಿರುವ ಆದರವನ್ನು ವಾಚಕರು ಈ ಗ್ರಂಥಕ್ಕೂ ತೋರಿಯಾರೆಂದು ನಂಬುತ್ತೇನೆ. ನಾನು ನಿರೀಕ್ಷಿಸಿ ದುದಕ್ಕಿಂತಲೂ ಪುಟಗಳು ಹೆಚ್ಚಾದ ಕಾರಣ ಬೆಲೆಯನ್ನು ಅನಿವಾರ್ಯ ವಾಗಿ ಹೆಚ್ಚಿಸಬೇಕಾಯಿತು. ಅಚ್ಚಿನ ವೆಚ್ಚ ಮತ್ತು ಕಾಗದದ ಬೆಲೆಯು ಏರಿಕೆ ಹೀಗೆ ಮಾಡಲು ಮತ್ತೊಂದುಕಾರಣ. ಇದಕ್ಕಾಗಿ ವಾಚಕರ ಕ್ಷಮೆ ಬೇಡುತ್ತೇನೆ. ಎಂದಿನಂತೆ ನನ್ನ ಪ್ರಿಯಮಿತ್ರರಾದ ಶ್ರೀ ಜಿ. ಎಚ್. ರಾಮರಾಯರು ಇದನ್ನು ಮುದ್ದಾಗಿ ಮುದ್ರಿಸಿದ್ದಾರೆ. ನನ್ನ ಪ್ರಿಯ ಶಿಷ್ಯನಾದ ಶ್ರೀ. ಎಸ್. ವಿ. ವಿಠಲ್ ಇದರ ಬರವಣಿಗೆಯಲ್ಲಿ ಸಹಾಯ ಮಾಡಿದ್ದಾನೆ. ಇವರಿಗೂ ನನ್ನನ್ನು ಪ್ರೋತ್ಸಾಹಿಸಿದ ಹಿರಿಯರಿಗೂ ಗೆಳೆಯರಿಗೂ ವಂದನೆಗಳು.

ನಂದನ ಸಂವತ್ಸರ<br>ಸಂಕ್ರಾಂತಿ<br>ಶಾರದಾ ಮಂದಿರ<br>೫೭೮ ಕೃಷ್ಣರಾಜವನಂ<br>ಮೈಸೂರು.

ವಿಶ್ವಭಾರತಿ ಶರಣು ;<br>ಕಿರು ತೀರ್ಥ ಮಲ್ತು<br>ಸಿರಿಗನ್ನಡಂ ಗೆಲ್ಗೆ

**ಎಚ್. ಎಂ. ಎಸ್.**

ಶ್ರೀ ರ ಸ್ತು

# ಚಂಡಶಾಸನ ಕಥಾಸಂಗ್ರಹದ ವಿವರಣೆ

೧. ಸಂಪ್ರದಾಯದಂತೆ ಸಮುದ್ರ, ದೇಶ, ಪುರವರ್ಣನೆಗಳಿಂದ ಈ ಕಥೆ ಮೊದಲಾಗುತ್ತದೆ.

ಭೂಮಿಗೆ ಅಲಂಕಾರಪ್ರಾಯವಾಗಿ ಸುರಮ್ಯಮಂಡಲ ಶೋಭಿಸಿತು—

ಮೇರುವಿನ ಅರ್ಧಮಂ—ಮೇರುವಿನ ಅರ್ಧಭಾಗವನ್ನು, ಜನ(ರಿಗೆ) ನಿಧಾನಮಂ—ಆಶ್ರಯಸ್ಥಾನವಾದ; ನೆಲೆಯಾದ, ಅಗ್ಗ (ಅರ್ಘ. ಸಂ.)ದ-ಶ್ರೇಷ್ಠವಾದ, ಜಂಬುದೀವ(ದ್ವೀಪ>ದೀಪ>ದೀವ)ಮಂ – ಜಂಬೂದ್ವೀಪವನ್ನು, ವಾರಿಧಿ—ಸಮುದ್ರವೆಂಬ, ಸರ್ಪನ್—ಸರ್ಪವು, ಅಪ್ಪಿದುದು—ಸುತ್ತುಗಟ್ಟಿತು. ಹಾಗೆ ವಾರಿಧಿ(ಯಿಂದ)ವೇಷ್ಟಿತ—ಸಮುದ್ರದಿಂದ ಸುತ್ತುವರಿದ, ಭೂಮಿಭಾಗದೊಳ್(ದಲ್ಲಿ), ಭಾರತವರ್ಷಂ—ಭಾರತವರ್ಷವು, ಒಪ್ಪಿದುದು—ಶೋಭಿಸಿತು. ಆ ಭಾರತವರ್ಷದ, ತೆಂಕವ(ಪ)ಕ್ಕ(ಪಕ್ಷ. ಸಂ.)ದೊಳ್—ದಕ್ಷಿಣಭಾಗದಲ್ಲಿ, ಧಾರಿಣಿಗೆ-ಭೂಮಿಗೆ, ಸುರಮ್ಯಮಂಡಳಂ—ಸುರಮ್ಯವೆಂಬದೇಶ, ಉಜ್ವಲ-ಕಾಂತಿಯುಕ್ತವಾದ, ಶ್ರವಣ—ಕಿವಿಗೆ, ಮಂಡನಂ – ಅಲಂಕಾರಪ್ರಾಯವಾಗಿ, ಆಯ್ತು—ಒಪ್ಪಿತು.

ಮೇರುಪರ್ವತದ ಅರ್ಧಭಾಗದಲ್ಲಿ ಲೋಕದ ಜನರಿಗೆ ನೆಲೆಯಾದ ಜಂಬೂದ್ವೀಪವುಂಟು. ಶ್ರೇಷ್ಠವಾದ ಈ ಜಂಬೂದ್ವೀಪವನ್ನು ಸಮುದ್ರ ಸುತ್ತುವರೆದಿದೆ. ಸಮುದ್ರದಿಂದ ಸುತ್ತುವರಿದ ಈ ಭೂಮಿ ಭಾಗದಲ್ಲಿ ಭಾರತವರ್ಷವಿದೆ. ಈ ಭರತಖಂಡದ ದಕ್ಷಿಣಭಾಗದಲ್ಲಿ ಕಾಂತಿಯುಕ್ತವಾದ ಸುರಮ್ಯವೆಂಬ ದೇಶ ಭೂಮಿಗೆ ಕರ್ಣಾಭರಣದಂತಿದೆ.

ಅನಂತನಾಥಪುರಾಣ ಚಂಪೂಕಾವ್ಯ. ಗದ್ಯಪದ್ಯಗಳಿಂದ ಕೂಡಿದ ಕಾವ್ಯಕ್ಕೆ ಚಂಪೂ ಎಂದು ಹೆಸರು. ಚಂಪೂಕಾವ್ಯಗಳಲ್ಲಿ ಪದ್ಯಪ್ರಧಾನ ;

ಗದ್ಯಗೌಣ. ಪದ್ಯಗಳು ಸಾಮಾನ್ಯವಾಗಿ ವೃತ್ತಕಂದಗಳ ರೂಪದಲ್ಲಿರುತ್ತವೆ. ವೃತ್ತ ನಾಲ್ಕುಸಾಲಿನ ಪದ್ಯ. ಇವು ಅಕ್ಷರಗಣಗಳಿಗೆ ಸೇರಿದವು. ವೃತ್ತಗಳಲ್ಲಿ ಅನೇಕ ಭೇದಗಳಿದ್ದರೂ ಕನ್ನಡ ಕವಿಗಳು **ವಿಶೇಷವಾಗಿ ಖ್ಯಾತಕರ್ಣಾಟಕ**ಗಳನ್ನು ಬಳಸುತ್ತಾರೆ. ಆ ಖ್ಯಾತ ಕರ್ಣಾಟಕಗಳು ಯಾವುವೆಂದರೆ :—ಉತ್ಪಲಮಾಲಾ, ಚಂಪಕಮಾಲಾ, ಶಾರ್ದೂಲವಿಕ್ರೀಡಿತ, ಮತ್ತೇಭವಿಕ್ರೀಡಿತ, ಸ್ರಗ್ಧರಾ ಮತ್ತು ಮಹಾಸ್ರಗ್ಧರಾ ವೃತ್ತಗಳು.

ಈ ಪದ್ಯ ಉತ್ಪಲಮಾಲಾವೃತ್ತದಲ್ಲಿದೆ. (ಗುರುವೊಂದಾದಿಯೊಳ್ **ಉತ್ಪಲಂ**). ಇದರಲ್ಲಿ ನಾಲ್ಕು ಸಾಲುಗಳಿರುತ್ತವೆ. ಪ್ರತಿ ಸಾಲಿನಲ್ಲಿಯೂ ೨೦ ಅಕ್ಷರಗಳಿರುತ್ತವೆ. ಕ್ರಮವಾಗಿ **ಭ, ರ, ನ,** ಭ, ಭ, ರ ಗಣಗಳೂ ಒಂದು ಲಘುವೂ, ಒಂದು ಗುರುವೂ ಬರುತ್ತವೆ. (ಲಕ್ಷಣ ; ಉತ್ಪಲಮಾಲೆಯುಪ್ಪುದು ಭರಂನಭಭಂರಲಗಂ ನೆಗಳ್ದಿರಲ್).

೨. ಸುರಮ್ಯ ಮಂಡಲದ ರಾಜಧಾನಿ ಪೌದನಪುರ.

ಪರಮಬ್ರಹ್ಮನ-ಆದಿತೀರ್ಥಂಕರನಾದ ವೃಷಭನಾಥನ, ನಂದನಂ-ಮಗನೂ, ಭರತಚಕ್ರಾಧೀಶ—ವೃಷಭನಾಥತೀರ್ಥಂಕರನ ಹಿರಿಯಮಗನಾದ ಭರತಚಕ್ರವರ್ತಿಯ, ದರ್ಪ+ಅಪಹಂ-ಗರ್ವವನ್ನು ಹುಡಿಗುಡಿಗುಟ್ಟಿದವನೂ, ಚರಮ-ಕೊನೆಯ, ಅಂಗಂ-ದೇಹವುಳ್ಳವನೂ, ಕುಸುಮ (ಹೂ)+ಇಷು(ಬಾಣ) ಮನ್ಮಥನಂತಿರುವವನೂ. ಶ್ರೀ ಮಹಾಮಂಡಲೇಶ್ವರನ್—ಚಕ್ರವರ್ತಿಯೂ ಆದ, ಬಾಹುಬಲಿಸ್ವಾಮಿಯು, ಆಳ್ದಿರ್ದುದು—ಆಳಿದ, ಉದಾರ—ಅತಿಶಯವಾದ, ವೀರ—ಪರಾಕ್ರಮ, ವಿಭವ—ವೈಭವಗಳ ಶ್ರೀ-ಲಕ್ಷ್ಮಿಯನ್ನು, ಪಾದನಂ-ಉಂಟುಮಾಡುವ, ಪೌದನಂ—ಪೌದನವೆಂಬ, ಪುರಂ—ಪಟ್ಟಣವು, ಉಂಟು—ಇದೆ. ಆ ಪುರಂ—ಪಟ್ಟಣವಾದರೋ, ಆ—ಸುಂದರವಾದ, ಪ್ರಸಿದ್ಧವಾದ, ಸುರಮ್ಯವಿಷಯ—ಸುರಮ್ಯವೆಂಬ ದೇಶದ, ಶ್ರೀ—ಕಾಂತಿಯುಕ್ತವಾದ, ವಕ್ತ್ರ (ಮುಖ) ಬಿಂಬ+ಉಪಮಂ—ಮುಖಬಿಂಬಕ್ಕೆ ಸಮನಾಗಿದೆ. (ಮತ್ತೇಭವಿಕ್ರೀಡಿತವೃತ್ತ. ಲಘುದ್ವಂದ್ವಂಗುರುದ್ವಂದ್ವಮಾಗಿರೆ ಮತ್ತೇಭ. ಲಕ್ಷಣಃ **ಸ ಭ ರಂ ನಂ ಮ ಯ ಲಂ ಗಮುಂ** ಬಗೆಗೊಳಲ್ ಮತ್ತೇಭವಿಕ್ರೀಡಿತಂ).

ಆದಿತೀರ್ಥಂಕರನ ಮಗನಾದ ಭರತಚಕ್ರವರ್ತಿಯ ಗರ್ವವನ್ನು ಹುಡಿಗುಟ್ಟಿದವನೂ, ಕೊನೆಯ ದೇಹವುಳ್ಳವನೂ, ಮನ್ಮಥನಂತಿರುವವನೂ, ಚಕ್ರವರ್ತಿಯೂ ಆದ ಬಾಹುಬಲಿದೇವನು ಆಳಿದ, ವೀರವೈಭವಗಳಿಗೆ ನೆಲೆಮನೆಯಾದ ಪೌದನವೆಂಬ ಪಟ್ಟಣವುಂಟು. ಅದು ಸುರಮ್ಯಮಂಡಲದ ಮುಖಬಿಂಬದಂತಿದೆ.

೩. ಪೌದನಪುರದ ದೊರೆ ವಸುಷೇಣ.

ಅನಿತು–ಅಷ್ಟೊಂದು, ಒಳ್ಪು-ಚೆಲುವಿನಿಂದ ಕೂಡಿ, ಎಸೆವ–ಶೋಭಿಸುವ, ಸುರಮ್ಯ+ಅವನಿಗಂ- ಸುರಮ್ಯವೆಂಬ ದೇಶಕ್ಕೂ (ಅವನಿ–ಭೂಮಿ), ಪೌದನಪುರಕ್ಕಂ–ಪೌದನವೆಂಬ ಪಟ್ಟಣಕ್ಕೂ, ವೀರ–ಶೂರರಾದ, ಅರಿ–ಶತ್ರುಗಳಾದ, ನೃಪಾಲ–ರಾಜರ, ಶಿರಃ–ತಲೆಯೆಂಬ, ಖರ–ಕಠಿಣವಾದ (ಗಟ್ಟಿಯಾದ) ಶಾಣಿ-ಮಸೆಗಲ್ಲಿನ ಮೇಲೆ, ನಿಘೃಷ್ಟ-ಉಜ್ಜಿದ, ಭುಜ–ತೋಳಿನಲ್ಲಿರುವ, ಕೃಪಾಣಕಂ–ಕತ್ತಿಯುಳ್ಳ, ವಸುಷೇಣಂ–ವಸುಷೇಣನು, ಅಧಿಪತಿ–ದೊರೆ, ಒಡೆಯ.

ಅಷ್ಟೊಂದು ಸೊಗಸಿನಿಂದ ಶೋಭಿಸುವ ಸುರಮ್ಯದೇಶಕ್ಕೂ ಅದರ ರಾಜಧಾನಿಯಾದ ಪೌದನಪುರಕ್ಕೂ ಶೂರರಾದ ರಾಜರ ತಲೆಗಳೆಂಬ ಗಟ್ಟಿಯಾದ ಸಾಣೆಕಲ್ಲಿನ ಮೇಲೆ ಉಜ್ಜಿದ ಕತ್ತಿಯಿಂದ ಕೂಡಿದ ತೋಳ ಶಕ್ತಿಯುಳ್ಳ ವಸುಷೇಣನು ದೊರೆಯಾಗಿದ್ದನು. (ವಸುಷೇಣನು ಶೂರನೆಂದು ಭಾವ).

ಇದು ಕಂದಪದ್ಯ. ಇದರ ಲಕ್ಷಣವನ್ನು ಈ ರೀತಿಯಲ್ಲಿ ಸಂಗ್ರಹಿಸಬಹುದು. ಮಾತ್ರಾಛಂದಸ್ಸಿನ ಕಂದಪದ್ಯದಲ್ಲಿರುವ ನಾಲ್ಕು ಸಾಲುಗಳಲ್ಲಿ ಒಂದು ಮತ್ತು ಮೂರನೆಯ ಸಾಲು ಒಂದುಸಮ; ಎರಡು ಮತ್ತು ನಾಲ್ಕನೆಯ ಸಾಲು ಒಂದುಸಮ. ಒಂದು ಮತ್ತು ಮೂರನೆಯ ಸಾಲುಗಳಲ್ಲಿ ನಾಲ್ಕು ಮಾತ್ರೆಯ ಮೂರುಗಣಗಳೂ ಎರಡು ಮತ್ತು ಮೂರನೆಯ ಸಾಲುಗಳಲ್ಲಿ ನಾಲ್ಕು ಮಾತ್ರೆಯ ಐದುಗಣಗಳೂ ಬರುತ್ತವೆ. ಇದು ಕಂದಪದ್ಯದ ಸಾಮಾನ್ಯಲಕ್ಷಣವಾದರೂ ಕೆಲವು ವಿಶೇಷ ಲಕ್ಷಣಗಳೂ ಉಂಟು. ವಿಷಮಸ್ಥಾನದಲ್ಲಿ ಎಂದರೆ ಒಂದು, ಮೂರು, ಐದು ಇವೇ ಮೊದಲಾದ ಗಣಗಳಲ್ಲಿ ಮಧ್ಯಗುರುವುಳ್ಳ (ᑌ–ᑌ) ಗಣ

ಬರಲಾಗದು. ಆರನೆಯ ಗಣಸ್ಥಾನದಲ್ಲಿ ಮಧ್ಯಗುರುವುಳ್ಳ ಇಲ್ಲವೆ ಸರ್ವ ಲಘುವುಳ್ಳ ಗಣ(ᑌ–ᑌ ; ᑌᑌᑌᑌ)ವಾಗಲೀ ಬರಬೇಕು. ಎಂಟನೆಯ ಸ್ಥಾನದಲ್ಲಿ ಅಂತ್ಯಗುರು (ᑌᑌ–;– –)ವುಳ್ಳ ಗಣಬರಬೇಕು.

೪. ವಸುಷೇಣನ ಮನಃ ಪ್ರಿಯೆಸುನಂದೆ—

ಅಪ್ಸರಸ್ತ್ರೀಯರಾದ ಊರ್ವಶಿ, ರಂಭೆ, ಮೇನಕೆ, ತಿಲೋತ್ತಮೆ, ಯೆಂಬರ-ಎಂದು ಹೆಸರುಳ್ಳವರ, ಹಾವಭಾವಮುಂ-ಬೆಡಗುಬಿನ್ನಾಣ ಗಳು, ಪುರ್ವಿನ-ಹುಬ್ಬಿನ, ಕೊಂಕು (ಗಂಡಸರನ್ನು ವಶಪಡಿಸಿಕೊಳ್ಳಲು ಹೆಂಗಸರು ಉಪಯೋಗಿಸುವ ಒಂದು ಅಸ್ತ್ರ), ಕಣ್–ಕಣ್ಣೆಂಬ ಮಲರ –ಹೂವಿನ, ಕಾಂತಿ, ಕದಂಪಿನ-ಕೆನ್ನೆಯ, ತೆಳ್ಪು–ಸೊಗಸು ಇವುಗಳ ನ್ನೆಲ್ಲ, ಆರ್ ಒರ್ವರೆ–ಯಾರೊಬ್ಬರೇ ಆಗಲಿ, ಗೆಲ್ವುದಕ್ಕೆ, ಸಾಲ್ವುದು- ಸಾಕಾಗುವುದು, ಎನಿಪ–ಎನಿಸಿಕೊಳ್ಳತಕ್ಕ, ರಾಣಿಯವಾಸದ–ಅಂತಃ ಪುರದ, ದೇಸೆ–ಚೆಲುವೆಯೂ ಆಸೆ–ಆಸೆಯೂ ಆದ, ಅಯ್ನೂರ್ವರೊಳಂ- ಐದುನೂರು ಜನ ಹೆಣ್ಣುಗಳಲ್ಲಿ, ದೊರೆಯಾದ ವಸುಷೇಣನ, ಚಿತ್ತ- ಮನಸ್ಸಿನ, ವೃತ್ತಿಯಿಂ–ಅಭಿಲಾಷೆಯಿಂದ, ಸುನಂದೆಯೆಂಬ ರಾಣಿ, ಪಿ(ಹಿ)ರಿಯಳ್(ಳು). ಸುನಂದೆ ದೊರೆಯ ಮೆಚ್ಚಿನ ಮಡದಿಯಾಗಿ ದ್ದಳು ಎಂದು ಭಾವ.

ಅಪ್ಸರಸ್ತ್ರೀಯರಾದ ಊರ್ವಶಿ, ರಂಭೆ, ಮೇನಕೆ, ತಿಲೋತ್ತಮೆ ಯರ ಬೆಡಗುಬಿನ್ನಾಣಗಳು, ಹುಬ್ಬಿನಕೊಂಕು, ಹೂವಿನಂತಿರುವ ಕಣ್ಣಿನ ಕಾಂತಿ, ಕೆನ್ನೆಯ ಸೊಗಸು ಇವುಗಳನೆಲ್ಲ ಗೆಲ್ಲಲು ಒಬ್ಬರೇ ಸಾಕೆನ್ನುವ ಐನ್ನೂರು ಜನ ಹೆಂಗಸರನ್ನುಳ್ಳ ವಸುಸೇಣನ ಅಂತಃಪುರದ ಹೆಣ್ಣುಗಳಲ್ಲಿ ಸುನಂದೆಯೆಂಬ ರಾಣಿ ದೊರೆಯ ಮೆಚ್ಚಿನ ಮಡದಿಯಾಗಿ ದ್ದಳು.

೫. ವಸುಷೇಣ ಸುನಂದೆಯರ ಪ್ರೇಮವನ್ನು ಇಲ್ಲಿ ವರ್ಣಿಸಿದೆ.

ವಸುಷೇಣ ಭೂಭುಜಂ (ದೊರೆ), ಸುನಂದೆಯ, ಮುಖಬಿಂಬಂ+ ಎಂಬ–ದುಂಡಾದ ಮುಖವೆಂಬ, ಮಣಿದರ್ಪಣದೊಳ್–ರನ್ನಗನ್ನಡಿ ಯಲ್ಲಿ, ಜಯವಧು–ಜಯಲಕ್ಷ್ಮಿ, ತನ್ನ ಬಾಹುಪೂರಕದ–ತೋಳು ಬಂದಿಯ (ಇದು ಒಂದು ಒಡವೆ) ಮೇಲೆ, ಮಲಂಗಿದ ಮಲಗಿದ,

ತೋಳ್ಗಳಂ–ತೋಳುಗಳನ್ನು, ಮನಃಪ್ರಿಯು–ತನ್ನ ಮನಸ್ಸಿಗೆ ಪ್ರಿಯ ಳಾದ ಸುನಂದೆಯು, ದರಹಾಸದೊಳ್–ಮುಗುಳ್ನಗೆಯಲ್ಲಿ, ನಲಿವ–ಸಂತೋಷಪಡುವ, ವಕ್ತ್ರಮನ್–ಮುಖವನ್ನು, ಊರ್ಜಿತ–ವೀರ, ಲಕ್ಷ್ಮಿ, ಹಾರಯಷ್ಟಿಯೊಳ್–ಕೊರಳಿನಲ್ಲಿ ಧರಿಸಿರುವ ಮುತ್ತಿನ ಹಾರ ದಲ್ಲಿ, ಒಲೆದು–ತೂಗಾಡಿ, ಉಯ್ಯಲಾಡೆ–ಉಯ್ಯಾಲೆಯಾಡಲು, ಸಾಕಾದ ಪಿರಿದಾದ–ಹಿರಿದಾದ ಎಂದರೆ ಅಗಲವಾದ, ಉರಮಂ–ಎದೆ ಯನ್ನು, ನಡೆನೋಡುವಂ–ಚೆನ್ನಾಗಿ ನೋಡುವನು. ವೀರಲಕ್ಷ್ಮಿ ವಿಜಯಲಕ್ಷ್ಮಿಯರಿಗೆ ಆಶ್ರಯಸ್ಥಾನನಾದ ವಸುಷೇಣನು ಮುಗುಳು ನಗೆ ಬೀರುವ ಸುನಂದೆಯು ಮುಖವನ್ನು ನೋಡಿ ಕಾಲಕಳೆಯುತ್ತಿ ದ್ದನು ಎಂದು ಭಾವ. ವಸುಷೇಣನು ಯುವಕ, ಶತ್ರುರಾಜರನ್ನು ಗೆದ್ದು ಜಯ ಸಂಪಾದಿಸಿದ್ದನು. ಸುನಂದೆಯಂತಹ ಚೆಲುವೆ ಅವನ ಮೆಚ್ಚಿನ ಮಡದಿ. ಬಾಳಿನಲ್ಲಿ ಅವನಿಗೆ ಯಾವ ಕೊರತೆಯಿರಲಿಲ್ಲ. ಸುಖಪಡಲು ಮನುಷ್ಯನಿಗೆ ಇನ್ನೇನುಬೇಕು ?

ವಸುಷೇಣನು ಸುನಂದೆಯು ಸುಂದರವಾದ ಮುಖವೆಂಬ ರನ್ನಗ ನ್ನಡಿಯಲ್ಲಿ ಜಯಲಕ್ಷ್ಮಿ ಮಲಗಿದ ತೋಳುಬಂದಿಯಿಂದ ಕೂಡಿದ ತನ್ನ ತೋಳುಗಳನ್ನೂ, ಮೆಚ್ಚಿನ ಮಡದಿಯಾದ ಸುನಂದೆಯು ಮುಗುಳುನಗೆ ಯಿಂದ ನಲಿದಾಡುವ ಮುಖದಲ್ಲಿ ತನ್ನ ಮುಖವನ್ನೂ, ಮತ್ತು ತನ್ನ ಕೊರಳಿನಲ್ಲಿ ಧರಿಸಿರುವ ಮುತ್ತಿನಹಾರದಲ್ಲಿ ಉಯ್ಯಾಲೆಯಾಡುವ ವೀರ ಲಕ್ಷ್ಮಿಗೆ ಆಶ್ರಯಸ್ಥಾನವಾದ ಅಗಲವಾದ ಎದೆಯನ್ನೂ ನೋಡಿಕೊಳ್ಳು ತ್ತಿದ್ದನು.

ಇದು ಚಂಪಕಮಾಲಾವೃತ್ತ. ಇದರಲ್ಲಿ ನಾಲ್ಕು ಸಾಲುಗಳಿರು ತ್ತವೆ. ಪ್ರತಿಸಾಲಿನಲ್ಲಿಯೂ ೨೧ ಅಕ್ಷರಗಳು. ಲಕ್ಷಣ: ಲಘು ನಾಲ್ಕು ಚಂಪಕಂ, ನಾಗವರ್ಮ. **ನ ಜ ಭ ಜ ಜಂ ಜರಂ** ಬಗೆಗೊಳುತ್ತಿರೆ ಚಂಪಕಮಾಲೆಯೆಂದಪರ್–ಕನ್ನಡ ಕೈಪಿಡಿ.

ವಚನ|| ಅಂತು–ಮೇಲೆ ಹೇಳಿದ ರೀತಿಯಲ್ಲಿ, ಸಕಲ–ಎಲ್ಲ, ರಾಜ್ಯಾಂಗ–ರಾಜ್ಯದ ಒಂಭತ್ತು ಅಂಗಗಳಾದ ರಾಜ, ಪ್ರಧಾನ, ಮಿತ್ರ, ಭಂಡಾರ, ದೇಶ, ದುರ್ಗ, ಪೌರ ಸೈನ್ಯ ಮತ್ತು ಪುರೋಹಿತರೆಂಬ ಲಕ್ಷ್ಮಿ

ಯೊಳಂ-ಲಕ್ಷ್ಮಿಯಲ್ಲಿಯೂ, ವಿನೋದದ ವಿಳಾಸದಿಂದ, ದೆಸೆವ(ಪ) ಡೆವಿನಂ-ಸೊಗಸುಪಡೆವಂತೆ, ಇಷ್ಟ-ಬೇಕಾದ ಬಯಸಿದ, ಸುಖಾನುಭವ-ಸುಖವನ್ನು ಅನುಭವಿಸುವ, ವಿಭೂತಿಯಿಂದ-ವೈಭವದಿಂದ, ಇರ್ದು(ದ್ದು) ಒಂದು ದಿನ, ವಾಹಳೀ (ವಾಹ್ಯಾಳಿ. ಸಂ) ಕುದುರೆಯ ಪ್ರದರ್ಶನ-ಮತ್ತು ಏರಾಟದ, ವಿನೋದದ, ಅವಸರದೊಳ್-ಸಮಯದಲ್ಲಿ, ಓರ್ವಂ-ಒಬ್ಬ, ಪೂರ್ವ-ಈ ಮೊದಲೇ, ಪರಿಚಿತ-ತಿಳಿದವನೂ, ಪ್ರಸನ್ನ-ಕಾಂತಿ, ಯಿಂದ ಕೂಡಿದ, ಆಕಾರ-ರೂಪವುಳ್ಳವನೂ ಆದ, ಸುದರ್ಶನನೆಂಬೊಂ-ಸುದರ್ಶನನೆಂಬುವನು, ಬಂದು, ಮಹಾರಾಜಂಗೆ-ದೊರೆಯಾದ ವಸುಷೇಣನಿಗೆ, ದರ್ಶನ-ನೋಡುವ ಸಂದರ್ಭದಲ್ಲಿ ಕೊಡುವ, ಉಪಾಯನಮನ್-ಕಾಣಿಕೆಯನ್ನು, ಇತ್ತು-ಕೊಟ್ಟು (ಈ. ಧಾ.) ಪೊಡವಟ್ಟು-ನಮಸ್ಕರಿಸಿ, (ಪೊಡವಡು. ಧಾ.), ನಿಂದು-ನಿಂತು, ದೇವರದೇವನ-ಸ್ವಾಮಿಯ, ಸಹೋದರಂ-ಒಡಹುಟ್ಟಿದವನೂ, ಸಹಪಾಂಸುಕ್ರೀಡಾ-ಧೂಳಾಟದ ಎಂದರೆ ಬಾಲ್ಯಸ್ನೇಹದ, (ಪಾಂಸು-ಧೂಳಿ) ಅನುಬಂಧ-ಸಂಬಂಧದ, ಸಂಗತ-ಜೊತೆಯ, ಬಂಧು-ಬಂಧುವೂ ಆದ, ಮಕರಗ್ರಾಹವೆಂಬ, ಪುರವರ-ಶ್ರೇಷ್ಠವಾದ ಪಟ್ಟಣಕ್ಕೆ, ಅಧೀಶ್ವರಂ-ಒಡೆಯನಾದ ಚಂಡಶಾಸನದೇವಂ-ಚಂಡಶಾಸನನು, ದೇವರಂ - ಸ್ವಾಮಿಯಾದ ತಮ್ಮನ್ನು, ಪ(ಹ)ಲವುದೆವಸಂ-ಅನೇಕ ದಿನಗಳು, ಅಗಲ್ದು+ಇರ್ದು-ಬಿಟ್ಟಿದ್ದು, ನೆನೆದು-ತಮ್ಮನ್ನು ನೆನೆಸಿಕೊಂಡು, ನೋಡಲ್(ಲು) ಬರುತ್ತುಂ-ಬರುತ್ತ, ಅವಸರಮನ್-ತಮ್ಮ ಸಮಯವನ್ನು, ಅಱಿಯಲ್-ತಿಳಿಯಲು, ಎನ್ನನ್-ನನ್ನನ್ನು, ಅಟ್ಟಿದಂ-ಕಳುಹಿದನು, ಎಂಬುದುಂ-ಎನ್ನಲಾಗಿ, ಅತಿ ಪ್ರೀತಿಯಿಂ-ತುಂಬ ಪ್ರೀತಿಯಿಂದ, ವಿಸ್ತಾರಿತ-ಅಗಲವಾದ, ಲೋಚನನ್+ಆಗಿ-ಕಣ್ಣುಳ್ಳವನಾಗಿ, ಬೇಗಂ-ಬೇಗ, ಈಗಳೆ-ಈಕ್ಷಣವೇ, ಬರವೇ(ಪೇ)ೞ್-ಬರುವಂತೆ ಹೇಳು, ಎಂದು, ಆತ್ಮ-ತನ್ನ, ನರ್ಮಸಚಿವಂಬೆರಸು-ಆಪ್ತಮಿತ್ರನೊಡನೆ, ಆತನಂ-ಆ ಸುದರ್ಶನನನ್ನು [ಹೆಸರಿಗೆ ತಕ್ಕಂತೆ ಅವನು ಸು-ದರ್ಶನನೇ.] ಕಟಿಪಿ-ಕಳುಹಿಸಿ, ಬಳಸಿ-ತನ್ನನ್ನು ಸುತ್ತುವರೆದು, ನಿಂದ-ನಿಂತ, ಗಂಧ-ಮದಿಸಿದ, ಸಿಂಧೂರ-ಆನೆಗಳ, ಘಟಾಪಟಲಮುಂ-ಸಮೂ

ಹವನ್ನು, ಇಕ್ಕೆಲ[ಎರಡು + ಕೆಲ-ಇರ್ಕೆಲ-ಇಕ್ಕೆಲ]ಕ್ಕೆ-ಎರಡು ಕಡೆ-[ಪಾರ್ಶ್ವ]ಗಳಿಗೂ, ತೆಗೆದ-ಸರಿಸಿದ ಪಸಾಯಿತರ-ಮೆಚ್ಚಿನ, ಅತುಳುಂಗಬಲನುಂ-ಎಣೆಯಿಲ್ಲದ ಬಲವುಳ್ಳವನೂ, ಆಸ್ಥಾನೀಕೃತ-ಸಭಾಸ್ಥಾನದಲ್ಲಿ ಇರಿಸಿದ, ರಾಜಸುತ-ಅರಸುಮಕ್ಕಳ, ಸಮಾಜನುಂ+ಆಗಿ-ಸಮೂಹವುಳ್ಳವನಾಗಿ, ನಿಂದ+ಆಗಳ್-ಸ್ನೇಹಿತನನ್ನು ಬರಮಾಡಿಕೊಳ್ಳಲು ನಿಂತಾಗ–

೬. ಈ ಪದ್ಯದಲ್ಲಿ ಚಂಡಶಾಸನನು ಬಂದ ವೈಭವವನ್ನು ವರ್ಣಿಸಿದೆ.

ಚಂಡಶಾಸನನೃಪಂ-ದೊರೆಯಾದ ಚಂಡಶಾಸನನು, ಕ್ಷಿತಿರಂಗಂ-ಭೂಭಾಗವೆಲ್ಲವೂ, ಭಟಕೋಟಿ-ಶೂರರಾದ ಕೋಟಿಭಟರ, ಪಾದ-ಕಾಲಿನ, ಹಾಗೂ ತುರಗ-ಕುದುರೆಗಳ, ಶ್ರೇಣೀ–ಸಾಲುಗಳ, ಖುರ. ಕಾಲಿನ ಗೊರಸಿನ, ವ್ರಾತ–ಮೂಹದಿಂದ, ಸಾತ್ಕೃತಂ–ಅದರಂತೆ ಆಯಿತು, ಆಶಾ+ಆವಳಿ-ದಿಕ್ಕುಗಳ ಸಮೂಹವೆಲ್ಲ, ಜನಗಳು ಧರಿಸಿದ್ದ ಭೂಷಣ+ಅಂಶು-ತೊಡವುಗಳ ಕಾಂತಿ ಮತ್ತು ಮೃಗನಾಭೀಸಾರ–ಕಸ್ತೂರಿಯು, ಸೌರಭ್ಯ-ಸುವಾಸನೆಯಿಂದ, ಸಾತ್ಕೃತಂ–ಅದರಂತೆ ಆಯಿತು, ಅಭ್ರಂ-ಆಕಾಶವು, ಚಮರೀಜ-ಚಾಮರಗಳ ಹಾಗೂ ಕೇತು-ಬಾವುಟಗಳ, ಪಟಲ-ಸಮೂಹಗಳ ಮತ್ತು ಶ್ವೇತ+ಬಿಳಿಯ, ಆತಪತ್ರ [ಆತಪ–ಬಿಸಿಲಿನಿಂದ, ತ್ರ-ಕಾಪಾತಕ್ಕದ್ದು]-ಕೊಡೆಗಳ, ಓಘ-ಸಮೂಹದಿಂದ, ಸಾತ್ಕೃತಂ–ಅದರಂತೆ ಆಯಿತು, ಎಂಬಂತಿರೆ-ಎನ್ನುವಂತಿರಲು, ಮಹೋತ್ಸಾಹದಿಂ-ಅತ್ಯಂತ ವೈಭವದಿಂದ, ಬಂದಂ-ಬಂದನು.

ಭೂಭಾಗವೆಲ್ಲ ಶೂರರಾದ ಭಟರ ಪಾದಗಳ ಹಾಗೂ ಕುದುರೆಯ ಸಾಲುಗಳ ಕಾಲಿನ ಗೊರಸಿನಿಂದ ಮುಚ್ಚಿಹೋಯಿತು. ದಿಕ್ಕುಗಳು ಜನರು ಧರಿಸಿದ್ದ ಭೂಷಣಗಳ ಕಾಂತಿ, ಕಸ್ತೂರಿಯ ಸುವಾಸನೆಯಿಂದ ತುಂಬಿಹೋಯಿತು. ಆಕಾಶವು ಚಾಮರ ಬಾವುಟ ಬೆಳ್ಗೊಡೆ ಇವುಗಳ ಸಮೂಹದಿಂದ ಮುಚ್ಚಿಹೋಯಿತು. ಹೀಗಿರಲು ಚಂಡಾಶಾಸನದೊರೆ ಮಹಾವೈಭವದಿಂದ ವಸುಷೇಣನಲ್ಲಿಗೆ ಬಂದನು.

ವಚನ|| ಅಂತು-ಮೇಲೆ ವರ್ಣಿಸಿದ ವೈಭವದಿಂದ, ಬರಲೊಡಂ-ಚಂಡಶಾಸನನು ಬರಲಾಗಿ, ಇರ್ವರುಂ- ಆ ಇಬ್ಬರು ಸ್ನೇಹಿತರೂ, ವಾಹನಂಗಳನ್-ತಾವು ಹತ್ತಿದ್ದ ವಾಹನಗಳನ್ನು, ಇಟಿ[ಳಿ]ದು, ರೋಮಾಂಚ-ಪುಳಕಗಳ, ಸಂಚಯಂ-ಗುಂಪು, ತೊಟ್ಟ-ಹಾಕಿಕೊಂಡ, ಅಂಗಿಗಳ, ತಟ್ಟು-ಗಂಟು, ಉರ್ಚಿ-ಬಿಚ್ಚಿ, ಮುಯ್ಪಿನ-ತೋಳಿನ ತುದಿಯ, ಎಡೆ-ಸ್ಥಳ, ಪೊಟ್ಟನೊಡಯೆ-ಚಟ್ಟನೆ ಸೀಳಲು, ಪರಸ್ಪರ+ ಆಲಿಂಗನಂ+ಗೆಯ್ದು-ಒಬ್ಬರನ್ನೊಬ್ಬರು ಅಪ್ಪಿಕೊಂಡು, ತತ್‌ಸಮಯ-ಆ ಕಾಲಕ್ಕೆ, ಸಮುಚಿತ-ತಕ್ಕುದಾದ, ಭಾಷಣ-ಮಾತು ಮತ್ತು ಸಂಭಾವನಾ+ಅನಂತರಂ-ಅತಿಥಿಗೆ ನಡೆಯಬೇಕಾದ ಮರ್ಯಾದೆ ಗಳಾದ ಮೇಲೆ, ವಸುಷೇಣ ಮಹಾರಾಜಂ(ನು), ತನ್ನ ಪಟ್ಟದ, ಮದ-ಮದಿಸಿದ, ವೇದಂಡಮಂ-ಆನೆಯನ್ನು (ಆನೆಯ ಮೇಲೆ) ಚಂಡ ಶಾಸನನನ್ (ನ್ನು), ಏಱಿಸಿ-ಹತ್ತಿಸಿ, (ಈ ಸ್ನೇಹಕ್ಕೆ ಉಪಚಾರಕ್ಕೆ ಚಂಡಶಾಸನನು ತೋರಿದ ಕೃತಜ್ಞತೆಯೇನು? ವಸುಷೇಣನು ತೆತ್ತ ಬೆಲೆ ಏನು?) ತಾನ್(ನು)ಬೇಱೆ(ರೆ)+ಒಂದು, ಭದ್ರಗಜಮಂ-ಲಕ್ಷಣ ಯುಕ್ತವಾದ ಆನೆಯನ್ನು, ಏಱಿ(ರಿ), ಮಹಾವಿಭೂತಿವೆ (ಬೆ) ರಸು- ಮಹಾವೈಭವದಿಂದ ಕೂಡಿ, ಚಂಡಶಾಸನನನ್ನು, ಒಡ(ನೆ) ಕೊಂಡು-ಜೊತೆಯಲ್ಲಿ ಕರೆದುಕೊಂದು ಬಂದು,

೭. ಚಂಡಶಾಸನನು ತನ್ನ ಪ್ರಿಯಮಿತ್ರನನ್ನು ವಿಶೇಷವಾಗಿ ಆದರಿಸಿದನು.

ಪುರ(ಪಟ್ಟಣ)ಲಕ್ಷ್ಮೀ (ಎಂಬ) ಲಲನಾ(ಹೆಣ್ಣು) + ಅಷ್ಟ ಶೋಭೆ-ಪುರಲಕ್ಷ್ಮಿಯ ಎಂಟುತೆರನಾದ ಅಲಂಕಾರ, ವರ-ಶ್ರೇಷ್ಠರಾದ ನಾರೀ-ಸ್ತ್ರೀಯರು, ಮಂಗಳ+ ಆಚಾರ-ಮಂಗಳಕರವಾದ ಸಂಪ್ರದಾ ಯಗಳನ್ನು ಆಚರಿಸುವಾಗ ಮಾಡತಕ್ಕ, ಚಾರು-ಮನೋಹರವಾದ, ರವಂ-ಶಬ್ದ, ಪೌರ-ಪಟ್ಟಣದ, ಜನ-ಜನರ, ಅವಲೋಕನ-ಚಂಡಶಾ ಸನನ ಸ್ವಾಗತದ ನೋಟವನ್ನು ನೋಡುವಿಕೆಯ ಹಾಗೂ, ವಚಃ. ಮಾತಿನ, ಕೌತೂಹಲಂ-ಕುತೂಹಲವು, ಪೆರ್ಚಿ-ಹೆಚ್ಚಲಾಗಿ, ಭೂಪತಿ ವಸುಷೇಣ ಮಹಾರಾಜನು, ಮಂದಿರಮಂ-ಮನೆಯನ್ನು ಪೊ(ಹೊ) ಕ್ಕು, ಸಮಸ್ತ-ಎಲ್ಲ ವಿಧವಾದ, ವಸ್ತು(ಗಳಿಂದಲೂ), ಸುಖ(ವನ್ನುಂಟು

ಮಾಡುವ), ಸನ್ಮಾನಂಗಳಿಂದಂ-ಮರ್ಯ್ಯಾದೆಗಳಿಂದ, ಆ ಮನೋಮಿತ್ರನಂ-ತನ್ನ ಮನೋಮಿತ್ರನಾದ ಚಂಡಶಾಸನನನ್ನು, ಬಿದ್ದು (ಬಿರ್ದು. ಹ. ಗ.)-ವಸುಷೇಣನು ಚಂಡಶಾಸನನಿಗೆ ಮಾಡಿದ ಔತಣ, ಪಲ್ಲಟಿಸಿತು-ವ್ಯತ್ಯಸ್ತವಾಯಿತು ಎಂದರೆ ಅತಿಯಾಯಿತು ಎಂಬಂತೆ-ಎನ್ನುವ ಹಾಗೆ, ಮನಂಬೊ(ಪೊ)ರೆದಂ-ಮನಸ್ಸಿಗೆ ಸಂತೋಷವನ್ನುಂಟುಮಾಡಿದನು. ಪಟ್ಟಣವನ್ನು ಚೆನ್ನಾಗಿ ಶೃಂಗರಿಸಿದರು. ಸ್ತ್ರೀಯರು ಸಂಪ್ರದಾಯದಂತೆ ಹಾಡುತ್ತಿದ್ದರು. ಜನರು ಈ ಉತ್ಸವವನ್ನು ನೋಡಿ ತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಿದ್ದರು ಎಂದು ಭಾವ.

ಪುರದ ಶೃಂಗಾರ, ಪುರಸ್ತ್ರೀಯರ ಮಂಗಳಕರವಾದ ಹಾಡು, ಪುರಜನರ ನೋಟ ಹಾಗೂ ಮಾತುಕತೆ ಇವು ಅತಿಶಯವಾಗಲು, ವಸುಷೇಣನು, ಮನೆಯನ್ನು ಹೊಕ್ಕು, ಔತಣ ವಿಪರೀತವಾಯಿತೆಂಬಂತೆ ಮನೋಮಿತ್ರನಾದ ಚಂಡಶಾಸನನನ್ನು ಮರ್ಯ್ಯಾದೆಮಾಡಿ ಸಂತೋಷಗೊಳಿಸಿದನು.

೮, ೯. ಈ ಎರಡು ಪದ್ಯಗಳಲ್ಲಿ ವಸುಷೇಣನು ಚಂಡಶಾಸನನಿಗಾಗಿ ಏರ್ಪಡಿಸಿದ ವಿನೋದಗಳನ್ನು ವಿವರಿಸಿದೆ. ಈ ಪದ್ಯಗಳನ್ನು ಓದಿದಾಗ ಶೂದ್ರಕನು ಕಾಲಕಳೆಯುತ್ತಿದ್ದ ರೀತಿಯನ್ನು ವರ್ಣಿಸುವ ನಾಗವರ್ಮ(೧)ನ ಕಾದಂಬರಿಯ ಪದ್ಯಗಳು ನೆನಪಿಗೆ ಬರುತ್ತವೆ. ಮೊದಲನೆಯ ಪದ್ಯ ತರಳವೃತ್ತ [ಲಕ್ಷಣ: ನಾಲ್ಕು ಸಾಲು. ಪ್ರತಿ ಸಾಲಿನಲ್ಲಿ ೧೯ ಅಕ್ಷರ. ತರಳವೃತ್ತಮೆನಿಪ್ಪುದೊಪ್ಪಿರೆ ನಂಭರಂ ಸಜಜಂಗಮುಂ -ಕನ್ನಡ ಕೈಪಿಡಿ]ದಲ್ಲಿದೆ. ಎರಡನೆಯದು ಮಲ್ಲಿಕಾಮಾಲೆ [ಲಕ್ಷಣ: ನಾಲ್ಕು ಸಾಲು, ಪ್ರತಿಸಾಲಿನಲ್ಲಿ ೧೮ ಅಕ್ಷರ. ಮಲ್ಲಿಕಾಯುತಮಾಲೆಯಪ್ಪುದು ರಂಸಜಂಜಭರಂ ಬರಲ್-ಕನ್ನಡ ಕೈಪಿಡಿ]. ಈ ವೃತ್ತಗಳ ಓಟದ ಗತಿಯನ್ನು ಗಮನಿಸಿ.

ಒರ್ಮೆ-ಒಂದೊಂದು ಬಾರಿ, ಸರಸ-ರಸವನ್ನು ಸೂಸುವ, ಕಾವ್ಯ -ಮಹಾಕವಿಗಳ ಕಾವ್ಯಗಳನ್ನು ಕೇಳುವ, ವಿನೋದಗೋಷ್ಠಿ [ಸಮೂಹ ಸಭೆ]ಯಿಂ-ವಿನೋದಗೋಷ್ಠಿಗಳಿಂದಲೂ, ಒರ್ಮೆ-ಒಂದೊಂದು ಬಾರಿ ನಾಟಕ ಮತ್ತು *ನಾಟಿಕಾ-ನಾಟಕ ನಾಟಿಕಗಳನ್ನು, ಪರಿನಟಿತ್.

---

*ಇವುಗಳ ಲಕ್ಷಣವನ್ನು ಅನುಬಂಧನದಲ್ಲಿ ನೋಡಿ.

ಚೆನ್ನಾಗಿ ನಟಿಸಿ ಆ ಮೂಲಕ ರಸಗಳನ್ನೂ [ನವರಸಗಳು: ಶೃಂಗಾರ, ವೀರ, ಕರುಣ, ಹಾಸ್ಯ, ಅದ್ಭುತ, ಭಯಾನಕ, ಭೀಭತ್ಸ, ರೌದ್ರ ಮತ್ತು ಶಾಂತ] ಭಾವಗಳನ್ನೂ ಹೊರಸೂಸುವ, ಭಂಗಿಯಿಂ-ರೀತಿ ಯಿಂದ, ಒರ್ಮೆ-ಒಂದೊಂದು ಬಾರಿ, ಮುದದೆ ಸಂತೋಷದಿಂದ, ಗೀತದ ವಾದ್ಯದ ಮತ್ತು ಅಚ್ಚರಿ [ಆಶ್ಚರ್ಯ. ಸಂ.]ಯ-ಆಶ್ಚರ್ಯವನ್ನುಂಟು ಮಾಡುವ, ನೃತ್ಯದ, ಕೇಳ್ಕೆಯಿಂ-ಕೇಳುವುದರಿಂದ, ಒರ್ಮೆ-ಒಂದೊಂದು ಬಾರಿ,ಮೇಷ ವಿಶೇಷದಿಂ–ಟಗರುಕಾಳಗದ ಅತಿಶಯದಿಂದ,

ಒರ್ಮೆ–ಒಂದೊಂದು ಬಾರಿ, ವಾಹ-ವಾಹನಗಳ ಏರಿಕೆಯ, ವಿಳಾಸ-ಸೊಗಸಿನ, ಕೇಳಿಯಿಂ-ವಿನೋದದಿಂದ, ಹಾಗೂ ಕಂದುಕ ಚೆಂಡಾಟದ, ಕೇಳಿಯಿಂ-ವಿನೋದದಿಂ-, ಒರ್ಮೆ-ಒಂದೊಂದುಬಾರಿ, ಗಜಯುದ್ಧದಿಂದೆ - ಆನೆಗಳ ಕಾಳಗದಿಂದ, ಒರ್ಮೆ–ಒಂದೊಂದು ಬಾರಿ, ಅಂಕದ-ಹೆಸರುಗೊಂಡ, ಅಗ್ಗದ-ಶ್ರೇಷ್ಠವಾದ ; [ಅರ್ಘ. ಸಂ.- ವಾರುವದ-ಕುದುರೆಯ, ಕಾಳೆಗಂಗಳಿನ್-ಕಾಳಗಗಳಿಂದ, ಒರ್ಮೆ] ಒಂದೊಂದು ಬಾರಿ, ಚಿತ್ರವಿಚಿತ್ರವಾದ, ಕೌತುಕಗಳಿಂದಂ-ಕೌತುಕಗ ಳಿಂದಲೂ, ಇಂತು-ಈ ರೀತಿಯಲ್ಲಿ, ಕೂರ್ಮೆಯಿಂ- ಪ್ರೀತಿಯಿಂದ [ಕೂರ್. ಧಾ,] ವಸುಷೇಣ ಭೂಪತಿ [ಭೂಮಿಗೆ ಪತಿ-ದೊರೆ], ಚಂಡ ಶಾಸನ ಭೂಪನೊಳ್[ನಲ್ಲಿ], ನೆಗಚ್ಚಿದಂ-ಸಂತೋಷಗೊಳಿಸಿದನು. [ನೆಗಬ್. ಧಾ. ಮಾಡು]

ತನ್ನಲ್ಲಿಗೆ ಬಂದ ಚಂಡಶಾಸನನನ್ನು ವಸುಷೇಣನು ನಾನಾರೀತಿ ಯಲ್ಲಿ ಎಂದರೆ ಒಮ್ಮೆ ಸರಸಕಾವ್ಯವಿನೋದಗೋಷ್ಠಿಯಿಂದ, ಒಮ್ಮೆ ನಾಟಕಗಳ ಪ್ರದರ್ಶನದಿಂದ, ಒಮ್ಮೊಮ್ಮೆ ಗೀತವಾದ್ಯಗಳಿಂದ ಕೂಡಿದ ನೃತ್ಯದಿಂದ, ಒಮ್ಮೆ ಜಟ್ಟಿಕಾಳಗದಿಂದ, ಒಮ್ಮೊಮ್ಮೆ ಟಗರು ಕಾಳಗ, ವಾಹನಗಳ ಏರಾಟ, ಕಂದುಕಕ್ರೀಡೆ, ಆನೆಗಳ ಹೋರಾಟ, ಕುದುರೆಗಳ ಕಾಳಗ, ಚಿತ್ರವಿಚಿತ್ರವಾದ ಕೌತುಕಗಳಿಂದ ಸಂತೋಷಗೊಳಿಸಿದನು.

ವಚನ|| ಅಂತು–ಮೇಲೆ ಹೇಳಿದ ರೀತಿಯಲ್ಲಿ, ನಿರ್ವಿಕಲ್ಪಮುಂ- ಎರಡಿಲ್ಲದ ಎಂದರೆ ಒಂದೇತೆರನಾದ ಮತ್ತು ನಿರಂತರಮುಂ-ತಡೆಯಿಲ್ಲದ

ಎಂದರೆ ಧಾರಾಕಾರವೂ ಆದ, ಸೌಹಾರ್ದದೊಳ್-ಸ್ನೇಹದಲ್ಲಿ, ಅಪ್ಪ ಉಂಟಾದ, ಏಕಸದನದ-ಒಂದೇ ಮನೆಯಲ್ಲಿ ವಾಸಮಾಡುವ, ಸಹಪಂಕ್ತಿ ಭೋಜನದ ತನ್ನ ಜೊತೆಯ ಸಾಲಿನಲ್ಲಿ ಊಟಮಾಡುವ, ಸಹವಿಳಾಸ ಕ್ರೀಡಿತದ-ತನ್ನೊಡನೆ ಕ್ರೀಡೆಯಾಡುವ, ಸಮಯಂಗಳೊಳಗೆ-ಸಮಯಗಳಲ್ಲಿ, ಏಱುಂಜವ್ವನಕ್ಕೆ-ಏರುತ್ತಿರುವ ಯೌವನಕ್ಕೆ [ಯೌವನ > ಜವ್ವನ] ಎಂದರೆ ತುಂಬುಯೌವನಕ್ಕೆ, ಅಲಂಕಾರಂ+ಆಗಿ-ಅಲಂಕಾರವಾಗಿ, ಕೈಮಾಡಿ-ಶೃಂಗರಿಸಿ, ಮೆಱೆವ-ಶೋಭಿಸುವ, ಕಾಮದೇವನ-ಮನ್ಮಥನ, ಕರವಾಳಂತೆ [ಕರದ+ಬಾಳ್]-ಕೈಕತ್ತಿಯಂತೆ, ಕಣ್ಣೊಳ್-ಚಂಡಶಾಸನನ ಕಣ್ಣಿನಲ್ಲಿ, ಪೊ[ಹೊ]ಳೆದು, ಎರ್ದೆಯೊಳ್-ಹೃದಯದಲ್ಲಿ ಉಳ್ಕಿ-ಹೊಳೆದು, ಪ್ರಕಾಶಿಸಿ, ಕೊಳ್ಳುಬೆಳ್ಳುಗೊಳಿಸುವ ಮನಸ್ಸನ್ನು ಸೆರೆಹಿಡಿಯುವ, ವಿಳಾಸದೊಳಂ-ಸೊಗಸಿನಲ್ಲಿ, ಸಮ್ಮೋಹನ ಶಕ್ತಿಯಂತೆ-ಚೆನ್ನಾಗಿ ಮರುಳುಗೊಳಿಸುವ [ಹುಚ್ಚು ಹಿಡಿಸುವ] ಶಕ್ತಿಯಂತೆ, ಭಾವಕರ-ರಸಿಕರ, ಬಗೆಯ-ಮನಸ್ಸಿನ, ಬಯ್ಕೆಯನ್-ಆಸೆಯನ್ನು, ಅಗೆಯೆತ್ತಿ - ಮೊಳಕೆಯೆತ್ತಿ, ಸೂಱೆಗೊಳ್ವ - ಸೂರೆಗೊಳ್ಳತಕ್ಕ, ಕಳಕಳಾ-ವಿದ್ಯೆಯ, ಪ್ರೌಢಿಯೊಳಂ-ಹಿರಿಮೆಯಲ್ಲಿ, ದುರಾತ್ಮಕನ್+ಅಪ್ಪ-ದುಷ್ಟಾತ್ಮನಾದ, ಚಂಡಶಾಸನನ, ಕಣ್ಮಲರ್ [ಮಲರ್ -ಹೂ]-ಹೂವಿನಂತೆ ಸೊಗಸಾದ ಕಣ್ಣು, ಕವಿದು, ಕಪ್ಪರೆಗೊಂಡು-ಆಶ್ಚರ್ಯಗೊಂಡು, ಮುಂಡಳಿಸಿ-ಒಟ್ಟಾಗಿ, ಒಳಸಿ-ಸುನಂದೆಯನ್ನು ಸುತ್ತುಗಟ್ಟಿ, ಸೋಲಕ್ಕೆ, ಆಲಂಬವಂ-ಆಲಂಬನೆಯನ್ನು, ಪಡೆದು-ಹೊಂದಿ, ಎರ್ದೆಗೆ-ಮನಸ್ಸಿಗೆ, ಆದಂ-ವಿಶೇಷವಾಗಿ, ಅದವಟಲುಂ-ದುಃಖವೂ, ತನುವಿಂಗೆ-ದೇಹಕ್ಕೆ, ತಾಪಮುಂ ತಾಪವೂ, ಒಡನೆ-ಜೊತೆಯಲ್ಲಿಯೇ, ಬೆಳೆಯೆವಳೆಯೆ-ಬೆಳೆದು ಬರಲು,

೧೦. ಚಂಡಶಾಸನನು ಸುನಂದೆಯ ರೂಪಕ್ಕೆ ಮರುಳಾದನು.

ಕೆಳೆಯನ-ತನ್ನ ಸ್ನೇಹಿತನಾದ ವಸುಷೇಣನ, ಪಂಕ್ತಿಭೋಜನದೊಳ್-ಸಾಲಿನಲ್ಲಿ ಕುಳಿತು ಊಟಮಾಡುತ್ತಿರುವಲ್ಲಿ, ವಿಳಾಸದೆ-ಊಟಕ್ಕೆ ಕುಳಿತು ಎಲ್ಲರನ್ನೂ ಮೋಹಗೊಳಿಸುವ ಚೆಲುವಿಕೆಯ ಸೊಗಸಿನಿಂದ, ಬಡ್ಡಿಸುತ್ತುಂ-ಬಡಿಸುತ್ತ, ಇರ್ಪ-ಇರುವ, ಎಳೆಯಳ-ಯುವ

ತಿಯಾದ ಸುನಂದೆಯು, ತೋಳಿನ ಮೂಲದ, ಪೊಗರ್-ಕಾಂತಿ, ಮಣಿ ಬಂಧದ-ಮಣಿಕಟ್ಟಿನ, ಚೆಲ್ವು ಸೊಗಸು, ಕೋಮಲ[ವಾದ] ಅಂಗುಳಿಗಳ-ಬೆರಳುಗಳ,ಕೊಂಕು ವಕ್ರತೆ, ಇವುಗಳೆಲ್ಲ ಒಟ್ಟಾಗಿ ಸೇರಿ, ಚಂಡಶಾಸನನ, ಕಣ್ಗೆ-ಕಣ್ಣುಗಳಿಗೆ, ಕೌತುಕಮಂ-ಸಂತೋಷವನ್ನೂ ಹಾಗೂ ಹಬ್ಬವನ್ನೂ, ಕುಡೆ ಉಂಟುಮಾಡಲು, ಇದರಿಂದ, ಭ್ರಮೆ ಗೊಂಡು ಅವುಗಳಿಗೆ ಮರುಳಾಗಿ, ಕಾಮುಕಂ ಹೆರಹೆಣ್ಣಿಗೆ ಮೋಹ ಗೊಂಡ ಚಂಡಶಾಸನನು, ಊಟಮಾಡುತ್ತಿದ್ದಾಗ, ವಳಿಗೆಯನ್- ತುತ್ತನ್ನು, ಎತ್ತಿ[ಕೊಂಡು], ಅದನ್ನು ಬಾಯಲ್ಲಿಟ್ಟುಕೊಳ್ಳುವುದಕ್ಕೆ ಬದಲಾಗಿ, ಹಣೆಯಲ್ಲಿ ಬೊಟ್ಟಿಡಲ್-ತಿಲಕದಂತಿಡಲು ಒಡರ್ಚಿ- ಯತ್ನಿಸಿ, [ಆ] ಬೞಿಕ್ಕೆ ಅನಂತರ ಎಚ್ಚರಗೊಂಡು ಸುನಂದೆಯು, ಪೊಗೞ್ತೆಗೆ-ಹೊಗಳಿಕೆಗೆ, ಇಕ್ಕಿದಂ-ಯತ್ನಿಸಿದನು. [ತುತ್ತನ್ನು ಬಾಯಲ್ಲಿ ಇಡುತ್ತಿಯೋ ಕಿವಿಯಲ್ಲಿಡುತ್ತಿಯೋ ಎಂಬ ಮಾತನ್ನು ಗಮ ನಿಸಿ].

ಗೆಳೆಯನಾದ ವಸುಷೇಣನೊಡನೆ ಊಟಕ್ಕೆ ಕುಳಿತಿದ್ದಾಗ ಎಲ್ಲ ರನ್ನೂ ಮೋಹಗೊಳಿಸುವ ಚೆಲುವಿಕೆಯಿಂದ ಬಡಿಸುತ್ತಿದ್ದ ಯುವತಿ ಯಾದ ಸುನಂದೆಯ ತೋಳಿನ ಮೂಲದ ಕಾಂತಿ, ಮಣಿಕಟ್ಟಿನ ಸೊಗಸು ಕೋಮಲವಾದ ಬೆರಳುಗಳ ಕೊಂಕು ಇವುಗಳೆಲ್ಲ ಒಟ್ಟಾಗಿ ಸೇರಿ, ಚಂಡ ಶಾಸನನ ಕಣ್ಣುಗಳಿಗೆ ಸಂತೋಷವನ್ನೂ ಹಬ್ಬವನ್ನೂ ಉಂಟುಮಾಡಿ ದವು. ಅವಳ ರೂಪಕ್ಕೆ ಅವನು ಮರುಳಾದನು. ಹೆರಹೆಣ್ಣಿಗೆ ಮರು ಳಾದ ಆ ಕಾಮುಕನು ಸುನಂದೆಯ ರೂಪವನ್ನು ನೋಡಿ ಬಾಯಿ ಚಪ್ಪ ರಿಸುತ್ತ ಬಾಯಲ್ಲಿಡಲು ಎತ್ತಿದ ತುತ್ತನ್ನು ಹಣೆಯಲ್ಲಿಟ್ಟುಕೊಂಡು ಬಳಿಕ ಎಚ್ಚೆತ್ತು ಅವಳನ್ನು ಹೊಗಳಲು ಮೊದಲು ಮಾಡಿದನು.

೧೧. ಚಂಡಶಾಸನನ ನಗೆಗಣ್-ಕಾಂತಿಯಿಂದ ಹೊಳೆದು ನಗೆ ಯನ್ನು ಬೀರುತ್ತಿದ್ದ ಕಣ್ಣು, ನಲ್ಲಳ-ತನಗೆ ಪ್ರಿಯಳೆನಿಸಿದ ಸುನಂದೆಯ, ಕೂಟಮಂ-ಸೇರುವಿಕೆಯನ್ನು, ಪಡೆದವು. ಅವನ ಶ್ರೋತ್ರಂ ಕಿವಿ, ಅವಳ ಮಾತುಗಳಂ-ಮಾತುಗಳ, ಇಂಪಂ-ಮಾಧುರ್ಯವನ್ನು, ಈಂ ಟಿತ್ತು-ಕುಡಿಯಿತು. [ಈಂಟು. ಧಾ. ಕುಡಿ] ಅವಳ್-ಆ ಚಲುವೆ,

ಸುಟಿದ-ಸುಳಿದಾಡಿದ, ಸೂಟಿಯೊಳ್-ಸಮಯದಲ್ಲಿ, ಅವಳ್ಗೆ ಬೀರಿದ ಸೌರಭಂ-ಸುವಾಸನೆ, ನಾಸಿಕೆಗೆ-ಮೂಗಿಗೆ, ಆಯ್ತು-ಉಂಟಾಯಿತು. ಆಕೆಯ, ಹಸ್ತ [ಕೈ] ಪಲ್ಲವ [ಚಿಗುರು]-ಚಿಗುರಿನಂತೆ ಕೋಮಲವಾದ ಕೈಯಿಂದ ಬಡಿಸಿದ, ರಸ+ಅನ್ನಾದ್ಯಗಳಿಂ ಷಡ್ರಸೋಪೇತವಾದ ಅನ್ನ ವೇ ಮೊದಲಾದ ಪದಾರ್ಥಗಳಿಂದ, ನಾಲಗಗೆ, ಸ್ವಾದು ರುಚಿ, ಆಯ್ತು. [ಅವಳು ಬಡಿಸಿದ ಪದಾರ್ಥಗಳು ರುಚಿ ಅವನ ಹಲ್ಲಿಗಿಳಿಯಿತು.] ಆದರೆ ಅವಳನ್ನು ಸೋಂಕುವ ಮುಟ್ಟುವ ಎಂದರೆ ಅವಳನ್ನು ಭೋಗಿಸುವ, ಆಸೆಗೆ, ಪಕ್ಕಾಗದೆ ಗುರಿಯಾಗದೆ ಎಂದರೆ ಆ ಆಸೆ ಈಡೇರದೆ, ನಿಂ, ಪಲ್ಲವಕನ ಕಾಮುಕನ [ವಿಟಪುರುಷ] ಅಂಗಕ್ಕೆ, ಅನಂಗನ ಕಾಮದ ಸಂಬಂಧವಾದ, ಜ್ವರಂ+ಆಯ್ತು-ಜ್ವರವುಂಟಾಯಿತು.

ಐದು ಇಂದ್ರಿಯಗಳಲ್ಲಿ ಚಂಡಶಾಸನನ ನಾಲ್ಕು ಇಂದ್ರಿಯಗಳು ಸುಖಪಡೆದವು. ಚಂಡಶಾಸನನ ಕಾಂತಿಯುಕ್ತವಾದ ಅರಳುಗಣ್ಣುಗಳು ಸುನಂದೆಯ ಸೌಂದರ್ಯವನ್ನು ಹೀರಿ ಸುಖವನ್ನು ಅನುಭವಿಸಿದವು. ಅವಳ ಇನಿಮಾತುಗಳ ಸೌಖ್ಯವನ್ನು ಕಿವಿ ಸವಿಯಿತು. ಆ ಚಲುವೆ ಸುಳಿಯುತ್ತಿದ್ದ ಸಮಯದಲ್ಲಿ ಅವಳ ಮೆಯ್ಮುಡಿಗಳಿಂದ ಸುಳಿಯುತ್ತಿದ್ದ ಸೌರಭವನ್ನು ಆ ಕಾಮುಕನ ಮೂಗು ಹೀರಿತು. ಅವಳು ತನ್ನ ಕೋಮಲ ಕೈಗಳಿಂದ ಬಡಿಸಿದ ಅನ್ನಾದಿಗಳನ್ನು ಸವಿದು ನಾಲಗೆಗೆ ರುಚಿಯೇರಿತು. ಆದರೇನು ? ಅವಳನ್ನು ಭೋಗಿಸುವ ಸುಖ ಈಡೇರದ ಆ ಕಾಮುಕನಿಗೆ ಕಾಮಜ್ವರವುಂಟಾಯಿತು.

ವಚನ || ಅಂತು-ಮೇಲೆ ಹೇಳಿದ ರೀತಿಯಲ್ಲಿ, ಕಂತು [ಮನಥ] ವಿನ, ಸಂತಾಪಕ್ಕೆ, ಪಕ್ಕಾಗಿ-ಗುರಿಯಾಗಿ, ಕುಕ್ಕುಟಿ+ಕುದಿದ ಚೆನ್ನಾಗಿ ಕುಡಿದ, ಉಕರ್ು+ಅದು-ಆ ದುಃಖ, ಒಳಗೊಳಗೆ, ಬೇವ-ಬೇಯುವ ಹೃದಯಮುಂ-ಮನಸ್ಸನ್ನು - ಪ[ಹ]ವ (ಪ) ಡಿಸಲ್+ಆಱದೆ- ಸಮಾಧಾನಕ್ಕೆ ತಂದುಕೊಳ್ಳಲು ಸಾಧ್ಯವಾಗದೆ, ತನಗೆ, ಬೀಡುಂದಾ [ತಾ] ಣಂ+ ಆದ ಬೀಡಾರದ ಸ್ಥಳವಾದ, [ಸ್ಥಾನ+ತಾಣ], ಮಾಡದ-ಉಪ್ಪರಿಗೆಯ ಪೆಱಗಣ-ಹೊರಗಿನ, ನಂದನವನದ-ಉದ್ಯಾನವನದ, ಮಾಕಂದ-ಮಾವಿನ, ಭೂರುಹದ-ಮರದ, ಮಂದ-ದಟ್ಟವಾದ, ಛಾಯೆಯೊಳ್-

ನೆರಳಿನಲ್ಲಿ, ಬೀಸುವ, ಕುಱುವೆಯ-ಕುರುವೆಯ, ಬಿಜ್ಜಣಿಗೆ [ವ್ಯಜನ, ಸಂ.]ಯೊಳ್-ಬೀಸಣಿಗೆಯಲ್ಲಿಯೂ, ಪಾ[ಹಾ]ಸುವ, ಬಾಳ ಎಳೆಯ, ಪ್ರವಾಳದ-ಹವಳದ, ತಲ್ಪ[ಹಾಸಿಗೆ]ತಳದೊಳಂ-ಹಾಸಿಗೆ ಯಲ್ಲಿಯೂ, ಸೂಸುವ, ಆಲಿ-ಆಲಿಕಲ್ಲಿನ [ತಂಪಾದ] ನೀರ್ ತುಂತು ಱೊಳಂ-ತುಂತುರು ನೀರಿನಲ್ಲಿಯೂ, ಪೂಸುವ ಲೇಪಿಸುವ, ಚಂದನ-ಶ್ರೀಗಂಧದ, ಸ್ಥಾಸಕದೊಳಂ-ಲೇಪನದಲ್ಲಿ, ವಸಂತಸಮಯಕ್ಕೆ, ಅನು ರೂಪ-ತಕ್ಕುದಾದ, ಛದ್ಮ-ಕೃತಕವಾದ, ಶಿಶಿರೋಪಚಾರ-ದೇಹಕ್ಕೆ ತಂಪನ್ನುಂಟುಮಾಡುವ ಉಪಚಾರಗಳ, ಚಾರು-ಮನೋಹರವಾದ ಚತುರತ್ವಂ-ಜಾಣ್ಮೆ, ಮೆಱೆಯೆ- ತೋರಪಡಲಾಗಿ, ಮಮ್ಮಲಮಱು ಗುತ್ತುಂ+ಇರ್ದ-ಮನಸ್ಸಿನಲ್ಲಿಯೇ ಅತಿಯಾಗಿ ಸಂಕಟಪಡುತ್ತಿದ್ದ, ತನ್ನ, ಅವಸ್ಥಾಂತರಮನ್ - ಸ್ಥಿತಿಯ ಸ್ವರೂಪವನ್ನು, ಅಱಿದುಂ-ತಿಳಿದೂ, ಅಱಿಯದಂತೆ-ತಿಳಿಯದಂತೆ, ಬೆಸಗೊಂಡ-ಕೇಳಿದ, ಸುದರ್ಶನನ್[ನು]ಎಂಬ, ಕೆಳೆಯಂಗೆ - ಸ್ನೇಹಿತನಿಗೆ, ಇಂತು+ಎಂದಂ - ಈ ರೀತಿಯಾಗಿ ಹೇಳಿದನು.

೧೨. ಚಂಡಶಾಸನನು ಸ್ನೇಹಿತನಿಗೆ ತನ್ನ ಮನಸ್ಸನ್ನು ಬಿಚ್ಚಿ ಹೇಳಿದನು.

ಚಂಡಶಾಸನನು, ಎಲೆ ಕೆಳೆಯ-ಎಲೈ ಸ್ನೇಹಿತನೆ, ನುಡಿಯಲ್ ಬಾರದು-ನನ್ನ ಮನಸ್ಸಿನಲ್ಲಿರುವುದನ್ನು ಆಡಿಕೊಳ್ಳುವಂತಿಲ್ಲ; ಆದರೆ ನುಡಿಯದೊಡೆ-ಮನಸ್ಸಿನಲ್ಲಿರುವುದನ್ನು ನುಡಿಯದಿದ್ದರೆ, ತೀರದು-ಮನಸ್ಸಿನ ಉದ್ವೇಗ ಇಳಿಯುವಂತಿಲ್ಲ. ನಿನಗೆ, ನನ್ನ ಬೆಂದಮನಂ-ಹಾಳು ಮನಸ್ಸು, ಸಂದೆಡೆಯೆನ್ನದೆ-ಸೇರಬಾರದ ಸ್ಥಳವನ್ನು ಸೇರಿದ್ದರೂ, ಅದನ್ನು ಹೇಳುವಂತಿಲ್ಲದಿದ್ದರೂ ಪೇಟ್ವೆಪೆನ್-ಹೇಳುತ್ತೇನೆ. ಈ ಕಡು ನಟನಂ-ಹತ್ತಿರದ ಬಂಧುವಿನ, ಸತಿಯ-ಹೆಂಡತಿಯ, ರೂಪು-ಚೆಲುವಿಕೆ, ಎನ್ನಂ-ನನ್ನನ್ನು, ಸೋಲಿಸಿತು-ಮರುಳುಮಾಡಿತು.

'ಎಲೆ ಮಿತ್ರನೆ, ನನ್ನ ಮನಸ್ಸಿನಲ್ಲಿರುವುದನ್ನು ಹೇಳುವಂತಿಲ್ಲ; ಆದರೆ ಹೇಳದಿದ್ದರೆ ಸಮಾಧಾನವಿಲ್ಲ. ಈ ಹಾಳುಮನಸ್ಸು ಸೇರಿರುವ ಸ್ಥಳವನ್ನೂ, ನನ್ನ ಹೃದಯದಲ್ಲಿರುವುದನ್ನೂ ನಿನಗೆ ಹೇಳುತ್ತೇನೆ. ಈ

ನನ್ನ ಹತ್ತಿರದ ಬಂಧುವಾದ ವಸುಷೇಣನ ಹೆಂಡತಿಯ ರೂಪ ನನ್ನನ್ನು ಸೋಲಿಸಿತು.'

೧೩. ಸುನಂದೆಯನ್ನು ಕೂಡುವುದೇ ನನಗೆ ಬದುಕಲು ಇರುವ ಮಾರ್ಗ.

ನನ್ನ ಮನಕ್ಕೆ-ಮನಸ್ಸಿಗೆ, ಭ್ರಮೆ-ಅವಳ ಮೇಲೆ ಮೋಹ, ಪತ್ತಿತ್ತು-ಹತ್ತಿತು. ಕಣ್‌ತಿರಿಪಿ ಕಣ್ಣುಗಳನ್ನು ತಿರುಗಿಸಿ, ಬಿಟ್ಟಂತೆ, ಅವು ಸುನಂದೆಯನ್ನು ಬಿಟ್ಟು ಉಳಿದ ಯಾವ ಪದಾರ್ಥಗಳನ್ನೂ, ಉಳಿದ ಯಾರನ್ನೂ, ಕಾಣವು. ಅಂಗ+ಉದ್ಭವವಹ್ನಿ - ದೇಹದಲ್ಲಿ ಹುಟ್ಟಿದ ಬೆಂಕಿ, ಅಂಗಮನ್-ದೇಹವನ್ನು, ಸುಟ್ಟಪುದು ಸುಡುತ್ತಿದೆ. ಪ್ರಾಣ (ವನ್ನು) ಸಂಧಾರಣ ಧರಿಸಿಕೊಳ್ಳುವ ಎಂದರೆ ರಕ್ಷಿಸಿಕೊಳ್ಳುವ, ಉದ್ಯ ಮಮಂ-ಉದ್ಯೋಗವನ್ನು ಎಂದರೆ ಕಾರ್ಯವನ್ನು, ಕಾಣೆಂ-ಕಾಣೆನು. ಸಖಿ-ಕೆಳೆಯನೆ, ಎ(ನ)ನಗೆ, ಬಾಳ್ವ-ಬದುಕತಕ್ಕ, ಉಪಾಯಂ-ಉಪಾ ಯವು, ಇನ್(ನ್ನು) ಎಂತು-ಇನ್ನಾವ ರೀತಿ ? ಒಮ್ಮೆ-ಒಂದು ಬಾರಿ ಯಾದರೂ, ಕಾರುಣ್ಯದಿಂ-ಸುನಂದೆಯ ದಯೆಯಿಂದ, ರಮಣೀ-ಆ ಹೆಣ್ಣಿನ, ಲೋಚನ-ಕಣ್ಣುಗಳ, ಚುಂಬನಂ-ಮುತ್ತಿಡುವಿಕೆ, ನಟ್ಟಿರ್ದ-ನಾಟಿರುವ, ಹೃತ್-ಹೃದಯದ, ಶಲ್ಯಮಂ ಬಾಣವನ್ನು, ಕಳೆಗುಮೇ-ಕಳೆಯುವುದೇ ? ಪೇಟು-ಹೇಳು.

ಎಲೆ ಗೆಳೆಯನೆ, ಸುನಂದೆಯನ್ನು ನೋಡಿದ ಮೇಲೆ ನನ್ನ ಮನ ಸ್ಸಿಗೆ ಮೋಹ ಕವಿದಿದೆ. ಕಣ್ಣುಗಳನ್ನು ತಿರುಗಿಸಿಬಿಟ್ಟಂತೆ ಅವು ಅವ ಳೊಬ್ಬಳನ್ನು ಬಿಟ್ಟು ಉಳಿದ ಯಾವ ಪದಾರ್ಥಗಳನ್ನೂ ಕಾಣವು. ನನ್ನ ದೇಹದಲ್ಲಿ ಹುಟ್ಟಿರುವ ಬೆಂಕಿ ನನಗೇ ಮೃತ್ಯುವಾಗಿ ನನ್ನ ದೇಹ ವನ್ನು ಸುಡುತ್ತಿದೆ. ಈ ನನ್ನ ಪ್ರಾಣಗಳನ್ನು ಉಳಿಸಿಕೊಳ್ಳಲು ಬೇರಾವ ಉಪಾಯವನ್ನೂ ಕಾಣೆನು. ನಾನು ಬದುಕತಕ್ಕ ಉಪಾಯ ಯಾವುದು? ಒಂದು ಬಾರಿ ಸುನಂದೆಯ ದಯೆಯಿಂದ ಅವಳ ಕಣ್ಣುಗಳನ್ನು ಮುತ್ತಿ ಡುವ ಪುಣ್ಯ ದೊರಕುವುದಾದರೆ, ನನ್ನ ಹೃದಯದಲ್ಲಿ ನಟ್ಟಿರುವ ಬಾಣ ವನ್ನು ಅದು ಕಳೆಯುವುದಕ್ಕೆ ಸಾಧ್ಯವೇ ?

ವಚನ|| ಆ ತಳೋದರಿಯನ್-ಆ ಹೆಣ್ಣನ್ನು, ಸಂಭೋಗಿಪ-ಸಂಭೋಗಮಾಡುವ ಎಂದರೆ ಕೂಡುವ, ಪುಣ್ಯಂ-ಪುಣ್ಯವು, ಎನಗಂ+

ಆದೊಡೆ-ನನಗಾದರೂ, ಸಲ್ಲದೆ-ದೊರಕಬಾರದೆ? ಗಂಡನ್-ಇರ್ದೊಡೆ -ಏನ್-ಗಂಡನಿದ್ದರೆ ಏನಾಯಿತು, ಎಂದು ತನ್ನ, ಹೃದಯದ-ಮನಸ್ಸಿನ, ಕವಾಟಂ-ಬಾಗಿಲನ್ನು, ತೆಟ್ಟಂತೆ(ದೆ)ಱಿದು-ಸಂಪೂರ್ಣವಾಗಿ ತೆರೆದು, ಅತ್ತಳಗಂ+ಆದ-ವ್ಯಥೆಯನ್ನು ತರುವ, ಉತ್ತುಂಡವೇ(ಜೇ)ಟವುಂ-ಹೆಚ್ಚಾದ ಅನುರಾಗವನ್ನು, ಬಯಲೊಳ್- ತನ್ನ ಮನಸ್ಸಿನಿಂದ ಹೊರಗೆ, ಇಕ್ಕಿ-ಕೆಡವಿ ಎಂದರೆ ತೋಡಿಕೊಂಡು, ಬಾಯಟಿದ- ಗೋಳಾಡಿದ, ನಿಜಪತಿಯ ತನ್ನ ಒಡೆಯನ, ನುಡಿಗೆ-ಮಾತಿಗೆ, ಸುದರ್ಶನನ್[ನು], ಎಂದಂ ಈ ರೀತಿ ನುಡಿದನು. ಮೇರೆಕ[ಗ]ಟಿದ ಮೇರೆ ಮೀರಿದ, ಬಟಿ-ಕ ಅನಂತರ, ಆರ-ಯಾವ ಮನುಷ್ಯನದೇ ಆಗಲಿ, ಸೈರಣೆಯುಂ-ತಾಳ್ಮೆಯು, ಓರೆವೋ[ಪೊ]ಗದೆ-ವಕ್ರವಾಗಿ ಎಂದರೆ ಅಡ್ಡದಾರಿಯಲ್ಲಿ ಹೋಗದೆ, ಇರವು-ಇರುವುದಿಲ್ಲ. ಪರಿವ ಒಂದು ಪದಾರ್ಥದಿಂದ ಮತ್ತೊಂದು ಪದಾರ್ಥಕ್ಕೆ ಹರಿಯುವ, ಮನಕ್ಕೆ ಮನಸ್ಸಿಗೆ, ಅದನ್ನು ಕಟ್ಟಿಹಾಕಲು ಸರಿಯಾದ ಪಗ್ಗಂ[ಪ್ರಗ್ರಹ. ಸಂ.]+ಇಲ್ಲಂ-ಹಗ್ಗವಿಲ್ಲ. ನೋಡುವ, ಕಣ್ಗೆ-ಕಣ್ಣುಗಳಿಗೆ, ಎಡೆಗ[ಕ]ಟ್ಟು+ಇಲ್ಲಂ—ಕಟ್ಟೆ ಎಂದರೆ ಅಡ್ಡಿ ಇಲ್ಲ. -ಅಲ್ಲದೆಯುಂ ಇದಲ್ಲದೆ.

೧೪. ಒಡೆಯನ-ಯಜಮಾನನ ಎಂದರೆ ಗಂಡನ ಕಾಪು ರಕ್ಷಣೆ-ಕಾ.ಧಾ.] ಕಟ್ಟಣಕಂ-ತುಂಬ ಬಲವುಳ್ಳದ್ದು, ಎಂದೊಡೆ-ಎಂದು ನುಡಿದರೂ- ಬಂಧುಗಳ್[ಳು] ಹಾಗೂ ಆಪ್ತರ್ ಇಷ್ಟರಾದವರು, ಈ ಕೆಲಸ ಆಗದು-ಮಾಡತಕ್ಕದಲ್ಲ, ಎಂದೊಡೆ-ಎಂದು ಹೇಳಿದರೂ, ಮನ ನಿಶ್ಚಂ-ನೀನು ಅವಳಿಗೆ ಮನಸ್ಸನ್ನು ಒಪ್ಪಿಸಿದರೂ, ಅವಳ್[ಳು],' ಈಯಳ್-ತನ್ನ ಮನಸ್ಸನ್ನು ನಿನಗೆ ಒಪ್ಪಿಸಳು, ಎಂದೊಡೆ-ಎಂದು ಬುದ್ಧಿಹೇಳಿದರೂ, ಇದು ಅಸಾಧ್ಯಂ-ಅವಳ ಸಂಪರ್ಕ ಅಸಾಧ್ಯ, ಎಂದೊಡೆ-ಎಂದು ನುಡಿದರೂ, ಒಲ್ಲಳ್-ನಿನ್ನನ್ನು ಅವಳು ಬಯಸಳು, ಎಂದೊಡೆ- ಎಂದರೂ, ಮೋಱ ಆಗದು ಇದು ಕ್ರಮವಲ್ಲ. ಎಂದೊಡೆ, ಎಂದರೂ, ಪರಾಂಗನೆ-ಆಕೆ ಬೇರೆ ಹೆಣ್ಣು ಪರಸ್ತ್ರೀ, ಎಂದೊಡೆ-ಎಂದು ಹೇಳಿದರೂ ಸಾಮ್ಯಂ-ಅಲ್ಲಂ-ನಿನಗೂ ಅವಳಿಗೂ ಹೋಲಿಕೆಯಿಲ್ಲ, ಎಂದೊಡೆ—ಎಂದು ಹೇಳಿದರೂ- ಕಾಮುಕರ್(ರು)- ತಲೆಹೋಗಿಯುಂ

-ತಲೆ ಹೋದರೂ ಚಿಂತೆಯಿಲ್ಲ- ಬಸಿದುಬೀಳದೆ ಪೋಹಗೊಳ್ಳದೆ-ಸೈರಿ ಸರ್-ಅಲ್ತೆ ಸೈರಿಸುವುದಿಲ್ಲ ಅಲ್ಲವೆ ?

ಪೆರರ ಹೆಣ್ಣಿಗೆ ಅವಳ ಗಂಡನ ಬಲವಾದ ರಕ್ಷಣೆಯಿದೆ ಎಂದು ನುಡಿದರೂ, ಬಂಧುಗಳೂ ಆಪ್ತರೂ ಈ ಕೆಲಸ ತಕ್ಕುದಲ್ಲವೆಂದರೂ, ನಿನ್ನ ಮನಸ್ಸನ್ನು ಅವಳಿಗೆ ಒಪ್ಪಿಸಿದರೂ ಅವಳು ತನ್ನ ಮನಸ್ಸನ್ನು ನಿನಗೆ ಒಪ್ಪಿಸಳು ಎಂದರೂ, ಅವಳು ನಿನ್ನನ್ನು ಒಲಿಯುವುದು ಅಸಾಧ್ಯ ವೆಂದರೂ, ಅವಳು ನಿನ್ನನ್ನು ಬಯಸುವುದಿಲ್ಲವೆಂದರೂ, ನೀನು ಅನು ಸರಿಸುತ್ತಿರುವುದು ಕ್ರಮವಲ್ಲವೆಂದರೂ, ಅವಳು ಹೆರರ ಹೆಣ್ಣು ಎಂದರೂ, ನಿನಗೂ ಅವಳಿಗೂ ಸಾಮ್ಯವಿಲ್ಲವೆಂದರೂ ಕಾಮುಕರು ತಮ್ಮ ತಲೆಹೋದರೂ ಚಿಂತೆಯಿಲ್ಲ ಪರರ ಹೆಣ್ಣಿಗಾಗಿ ಬಸಿದುಬಿದ್ದಾರೆ ಹೊರತು ಸೈರಿಸುವುದಿಲ್ಲ ಅಲ್ಲವೆ ? (ಸುಮ್ಮನೆ ಇರುವುದಿಲ್ಲ, ಮನಸ್ಸನ್ನು ಬೇರೆಕಡೆ ಹರಿಬಿಡುತ್ತಾರೆ ಎಂದರ್ಥ.)

ವಚನ ‖ ಆದೊಡೆ+ಏನಾದುದು- ಆದರೂ ಇಷ್ಟರಿಂದಲೇ ಏನಾ ಯಿತು ? ಆ ನಿತಂಬಿನಿಯೊಳ್-ಆ ಚೆಲುವೆಯಾದ ಸುನಂದೆಯಲ್ಲಿ ನಮ್ಮ ಮನೋರಥಸಿದ್ಧಿಗೆ ಮನಸ್ಸಿನ ಬಯಕೆ ಕೈಗೂಡುವುದಕ್ಕೆ, ಅವಕಾಶಂ+ ಉಂಟು-ಅವಕಾಶವುಂಟು, ಅದು+ಎಂತಪ್ಪೊಡೆ-ಅದು ಹೇಗೆ ಎಂದರೆ,

೧೫. ಮುರುಳಿಗೆ ಧೂಪ ಎತ್ತುವಂತೆ ಸುದರ್ಶನನು ಸುನಂದೆ ತನ್ನೊಡನೆ ಚಂಡಶಾಸನನ ವಿಷಯವಾಗಿ ಮಾತನಾಡಿದಳೆಂದು ದೊರೆಗೆ ನುಡಿದನು.

ವಿನಯದಿಂ-ವಿನಯದಿಂದ, ಆ ಕೋಕಿಳ (ಕೋಗಿಲೆ)ನಾದೆ-ಕೋಗಿಲೆ ಯಂತೆ ಧ್ವನಿಯುಳ್ಳ ಆ ಸುನಂದೆ, ನನ್ನನ್ನು ಕುರಿತು, ನಿಮ್ಮ, ಅರ ಸರ್(ರು), ಏಂಕಾರಣಂ- ಯಾವ ಕಾರಣಕ್ಕಾಗಿ ಇಲ್ಲಿಗೆ ಬಂದರ್ ? ಇಲ್ಲಿಯ, ಕಾರ್ಯಾಂತರಂ-ಕೆಲಸದ ವಿಶೇಷವಾದರೂ, ಏಂ-ಏನು ? ಪ್ರಯಾಣದಿನಂ-ನೀವು ಇಲ್ಲಿಂದ ಪ್ರಯಾಣಮಾಡುವ ದಿನವಾದರೂ, ಇನ್ನೆಂದು ? ಎಂದು ಈ ರೀತಿಯಲ್ಲಿ ಆಕೆ ನನ್ನನ್ನು ನಾನಾಪ್ರಶ್ನೆ ಗಳನ್ನು ಕೇಳಿ, ತಾಂ-ತಾನು- ಪೆತ್ತ-ತನ್ನನ್ನು ಪಡೆದ, ತಂದೆಯ ಮಿತ್ರಂಗೆ ಕೆಳೆಯನಿಗೆ, ಒಡ(ನೆ)ವು(ಪು>ಹು)ಟ್ಟಿದ, ಅಣ್ಣನ, ಸಹಾ

ಯಂಗೆ-ಸಹಾಯಮಾಡಲು ಬಂದವನಿಗೆ, ಆಡುವಂತೆ ಮಾತನಾಡುವ ವಳ ಹಾಗೆ, ಎನ್ನಯ- ನನ್ನ, ಕೂಡೆ-ಜೊತೆಯಲ್ಲಿ, ಆಡಿದಳ್-ನುಡಿದಳು. ಇಂತು+ಇದು-ಅವಳು ಈ ರೀತಿ ನುಡಿದುದು, ಏನ್ ಅಳಿಪೊ ಏನು ಅವಳು ತನ್ನ ಮನಸ್ಸಿನಲ್ಲಿದ್ದುದನ್ನು ಆಸೆಯಿಂದ ತೋಡಿಕೊಂಡಳೋ, ಮೇಣ್ ಇಲ್ಲವೆ, ನಿರ್ವ್ಯಾಹವೋ ಯಾವ ಆಸೆಯನ್ನೂ ಮನಸ್ಸಿನಲ್ಲಿಟ್ಟುಕೊಳ್ಳದೆ ಸಹಜವಾಗಿ ನುಡಿದಳೋ, ಭಾವಿಸಾ-ಯೋಚಸೆಮಾಡಯ್ಯ.

ಇಂಪಾದನುಡಿಯುಳ್ಳ ಸುನಂದೆ ನನ್ನೊಡನೆ ನಿನ್ನ ವಿಚಾರವಾಗಿ ಈರೀತಿ ನುಡಿದಳು. 'ನೀವು ಇಲ್ಲಿಗೆ ಬಂದಿರುವ ಕಾರಣವೇನು ? ಇಲ್ಲಿ ಕಾರ್ಯವಿಶೇಷವೇನಾದರೂ ಉಂಟೇ ? ಇಲ್ಲಿಂದ ನೀವು ಪ್ರಯಾಣ ಮಾಡುವ ದಿನವಾದರೂ ಎಂದು ?' ಹೀಗೆಂದು ಆಕೆ ನನ್ನೊಡನೆ ತಾನು ಹೆತ್ತತಂದೆಯ ಸ್ನೇಹಿತನೊಡನೆ, ಒಡಹುಟ್ಟಿದ ಅಣ್ಣನಿಗೆ ಸಹಾಯ ಮಾಡಲು ಬಂದವನೊಡನೆ ಮಾತನಾಡುವಂತೆ ನುಡಿದಳು. ಅವಳು ಈ ರೀತಿ ನನ್ನೊಡನೆ ನುಡಿದುದು ಅವಳ ಮನಸ್ಸಿನ ಆಶೆಯನ್ನು ಸೂಚಿಸುವುದೋ ಇಲ್ಲವೆ ಯಾವ ಆಶೆಯನ್ನೂ ಮನಸ್ಸಿನಲ್ಲಿಟ್ಟುಕೊಳ್ಳದೆ ಸಹಜವಾಗಿ ನುಡಿದಳೋ ನೀನೇ ಯೋಚಿಸಯ್ಯಾ !'

ವಚನ || ಎಂಬುದಂ-ಸುದರ್ಶನನು ಈ ರೀತಿ ನುಡಿಯಲು, ಚಂಡಶಾಸನನು ಸುದರ್ಶನನ ಮಾತನ್ನು ಒಪ್ಪಿಯೇನಂಬದೆ, ಅರಸನ್-ರಾಜನಾದ ಚಂಡಶಾಸನನು, ಆ ಕೃತ್ಯೋಪಚಾರಮನ್-ಆ ಸುನಂದ ಆಡಿದ ಉಪಚಾರದ ಮಾತುಗಳನ್ನು, ಒಲವೆಂದು-ಪ್ರೇಮವೆಂದು, ಎಂತು ಹೇಗೆತಾನೆ, ಕೈಕೊಳಲ್-ಸ್ವೀಕರಿಸಲು, ಬಂದಪುದು-ಬರುವುದು?

೧೬. ಸುನಂದೆ ನನಗೆ ದಕ್ಕಳೆಂದು ಚಂಡಶಾಸನನು ನುಡಿಯಲು, ಸುದರ್ಶನನು ಅವನನ್ನು ಸಮಾಧಾನಗೊಳಿಸಿದನು.

ಅಲ್ಲದೆ ಆ ಮದಿರಾಕ್ಷಿ ಆ ಚೆಲುವೆ, ತನ್ನ ಇನಿಯನ್-ಪ್ರಿಯನು, ಇರ್ದವೊಲೆ ಇದ್ದಹಾಗೆಯೇ, ಎ(ನ)ನ್ನ+ಒಡನೆ(ಕೂಡಲು), ಆಸೆಗೆಯ್ಯಳ್-ಬಯಸುವುದಿಲ್ಲ. ಆ (ವಸುಷೇಣನ) ಕೋಮಲ-ಚೆಲುವಾದ ಗಾತ್ರಮಂ- ದೇಹವನ್ನು, ಎಂದರೆ ವಸುಷೇಣನ ಅಂಗಸುಖವನ್ನು,

ಸವಿದ-ಅನುಭವಿಸಿದ, ಕಣ್ಮಲರ್ಗೆ-ಚೆಲುವಾದ ಕಣ್ಣುಗಳಿಗೆ (ಮಲರ್-ಹೂವು), ಎನ್ನಯ-ನನ್ನ, ಗಂಡಗಾಡಿ-ಅತಿಶಯವಾದ ಚೆಲುವು, ಆಕೆಗೆ ಶೋಭಾವಹಂ+ಆಗದು - ಸೊಗಸನ್ನುಂಟುಮಾಡುವುದಿಲ್ಲ, ಎಂದೊಡೆ ಚಂಡಶಾಸನನು ಹೀಗೆಂದು ಹೇಳಲಾಗಿ, ಸಖಂ-ಕೆಳೆಯನಾದ ಸುದರ್ಶನನು, ನೃಪ-ಅರಸನೆ, ನೀಂಬರೆ-ನೀನು ಪ್ರೀತಿಸಿ ಬರಲು, ಮಾಣ್ಬ-ನಿರಾಕರಿಸತಕ್ಕ, ಅಡ್ಡಿಮಾಡುವ ಜೋಡೆಯರ್-ಜಾರೆಯರು, ಉಂಟೆ? ಹಾಗಾದರೆ ಕಾಮನ, ತೋಳೊಳ್+ಇರ್ದ-ತೋಳಿನಲ್ಲಿರುವ, ರತಿ-ರತಿಯು, ಶಂಭುಕುಮಾನುಮಂ-ಈಶ್ವರನ ಮಗನನ್ನೂ ಕೂಡ, (ಗಣೇಶ ಮತ್ತು ಷಣ್ಮುಖರು ಈಶ್ವರನ ಮಕ್ಕಳು. ಗಣೇಶನಿಗೆ ಆನೆಯ ಮುಖ, ಷಣ್ಮುಖನಿಗೆ ಆರು ಮುಖಗಳು. ಇಂತಹವರನ್ನು ರತಿ ಪ್ರೀತಿಸುವಳೆಂದು ಈ ವಾಕ್ಯದ ಭಾವವಿರಬಹುದೆ?) ಬರುಂಟಳೇ-ಪ್ರೀತಿಯಿಂದ ಲಲ್ಲೆಮಾಡಳೆ?

"ಆ ಚೆಲುವೆಯು ತನ್ನ ಪ್ರಾಣಪ್ರಿಯನು ಇದ್ದಂತೆ ನನ್ನ ಅಂಗಸಂಗವನ್ನು ಬಯಸಳು. ಹೆಚ್ಚೇನು? ವಸುಷೇಣನ ಮನೋಹರವಾದ ದೇಹದ ಸವಿಯನ್ನು ಅನುಭವಿಸಿದ ಆಕೆಯ ಚೆಲುವಾದ ಕಣ್ಣುಗಳಿಗೆ ನನ್ನದೇಹದ ಸೊಗಸು ಒಪ್ಪದು" ಚಂಡಶಾಸನನು ಹೀಗೆಂದು ನುಡಿಯಲು ಅವನ ಸ್ನೇಹಿತನಾದ ಸುದರ್ಶನನು ಈ ರೀತಿ ನುಡಿದನು- "ಎಲೆ ಅರಸೆ, ನೀನು ಪ್ರೇಮದಿಂದ ಸವಿಯಾಸಕ್ಕೆ ಬರಲು ಅದನ್ನು ಜಾರೆಯರು ನಿರಾಕರಿಸಿದರೆ ಕಾಮನ ತೋಳಿನಲ್ಲಿರುವ ರತಿ ಶಂಭುಕುಮಾರನನ್ನು ಪ್ರೀತಿಯಿಂದ ಲಲ್ಲೆಮಾಡಿದಂತಾಗುತ್ತದೆ.

ವಚನ || ಅಲ್ಲದೆಯುಂ ಮೇಲಾಗಿ ಇದಲ್ಲದೆ, ದೇವ-ಸ್ವಾಮಿ, ನೀನುಂ ನೀನು ಮತ್ತು ಆತನುಂ ಅವಳ ಗಂಡನಾದ ವಸುಷೇಣನೂ, ಆರೋಗಿಸಿ ಊಟಮಾಡಿ, ಕೈಘಟ್ಟಿಯುಂಗೊ(ಕೊ)ಳುತುಂ ಶ್ರೀಗಂಧವನ್ನು ಸ್ವೀಕರಿಸುತ್ತ, ಏಕ ಒಂದೇ, ಮರಾಳ-ಹಂಸದ ಪುಕ್ಕದ ತೂಳ-ಹತ್ತಿಯ ತಲ್ಪ-ಹಾಸಿಗೆಯ, ಆಸನದೊಳ್ ಪೀಠದಲ್ಲಿ, ಪರಸ್ಪರಂ-ತಮ್ಮ ತಮ್ಮಲ್ಲಿ ಸುಖಸಂಭಾಷಣಾವಿಶೇಷದಿಂ - ಸಂತೋಷದಿಂದ ಮಾತನಾಡುತ್ತ ಇರ್ದಲ್ಲಿ-ಇರುವಾಗ, ನಿನ್ನ, ಪೆಱಗೆ-ಹಿಂದೆ, ಕುಳ್ಳಿರ್ದ-ಕುಳಿ

ತಿದ್ದ, ಏ(ನ)ನ್ನ, ಕಣ್ಗೆ ಕಣ್ಣುಗಳಿಗೆ, ತೆಱಪು+ಆದುದು ಅವಕಾಶ ವಾಯಿತು. ಆಗ ಆ ಸರೋಜನಯನೆ-ಕಮಲದಂತೆ ಕಣ್ಣುಳ್ಳ ಆಕೆ, ವಿನೋದ ವಿಲಾಸದ ಅಭಿನಯದೊಳ್+ಇರ್ದು ನಟನೆಮಾಡುತ್ತ,

೧೭. ಸುನಂದೆ ಶೃಂಗಾರಚೇಷ್ಟೆಯನ್ನು ಅಭಿನಯಿಸಿದಳು.

ಮನಮಂ-ಸುನಂದೆ ತನ್ನಮನಸ್ಸಿನ ಅಭಿಪ್ರಾಯವನ್ನು,ಮುಂದೆ+ ಇಟ್ಟು ತೆರೆದು ತೋರಿಸಿ, ಮಾತಂ-ತಾನು ಆಡುವ ಮಾತನ್ನು, ಮನದೆ ಕೊಳಿಸಿ ಮನಸ್ಸನ್ನು ಆಕರ್ಷಿಸುವಂತೆ ಮಾಡಿ, ಕಂಡೂತಿ+ಆದಂತಿದೆ- ನವೆಯಾದಂತೆ, ಆಲಿಂಗನದ ಅಪ್ಪುಗೆಯ ಇಂಪಂ-ಸೊಗಸನ್ನು, ಚುಂಬನ +ಆಸ್ವಾದನ ಮುತ್ತಿನ ಸವಿಯ, ಸುಖಮುಮನ್ ಸುಖವನ್ನು, ಅಂತಃ ಪ್ರವಿಷ್ಟ+ಅಂಗಸಂಪಾದನಮಂ-ತನ್ನ ದೇಹ ತನ್ನ ಪ್ರಿಯನ ದೇಹ ದೊಡನೆ ಸೇರುವ ರೀತಿಯನ್ನು,ಮೇಲ್ವಾ(ಪಾ)ಯ್ದು-ತಾನಾಗಿಯೆ ಮೇಲೆ ಬಿದ್ದು, ಮಾಡಲ್(ಲು), ತವಕಿಪ-ಆತುರಗೊಳ್ಳತಕ್ಕ, ನವಭಾವಾತಿ ರೇಕಂಗಳಿಂ–ಹೊಸಹೊಸ ಭಾವಾತಿಶಯಗಳಿಂದ, ಕಾಮಿನಿ-ಆ ಹೆಣ್ಣು (ಕಾಮಿನಿ ಎಂಬ ಪದ ಈ ಸಂದರ್ಭಕ್ಕೆ ಎಷ್ಟು ಉಚಿತವಾಗಿದೆ!) ಗಂಡನ, ನೆವದಿಂ-ನೆಪದಿಂದ, ನಿನ್ನಂ-ನಿನ್ನನ್ನು, ನೋಡಿದಳ್(ಳು), ಅದಂ-ಆ ಸುನಂದೆಯ ಅಂಗಚೇಷ್ಟೆಗಳನ್ನು, ಆಗಳ್-ಆ ಸಂದರ್ಭದಲ್ಲಿ, ನೀವು ಕಂಡಿರಿಲ್ಲಕ್ಕುಂ-ನೀವು ಕಾಣಲಿಲ್ಲ.

✓ಸುನಂದೆ ಗಂಡನ ನೆವದಿಂದ ನಿಮ್ಮ ಮುಂದೆ ತನ್ನ ಮನಸ್ಸನ್ನು ತೆರೆದು ತೋರಿಸಿದಳು. ನಿಮ್ಮನ್ನು ಆಕರ್ಷಿಸುವ ಮಾತುಗಳನ್ನಾಡಿ ದಳು.✓ನವೆಯಾದಂತೆ ಅಪ್ಪುಗೆಯ ಸೊಗಸನ್ನು ಮುತ್ತಿನ ಸವಿಯ ಸುಖವನ್ನು, ನಿಮ್ಮ ಅಂಗದೊಡನೆ ಅವಳ ಅಂಗ ಸೇರತಕ್ಕ ರೀತಿಯನ್ನು ತಾನೇ ಮೇಲೆಬಿದ್ದು ಮಾಡತಕ್ಕ ಹೊಸಹೊಸ ಭಾವಗಳ ಅಭಿನಯ ಗಳನ್ನು ಮಾಡಿ ತೋರಿಸಿದಳು. ಅವಳ ಆ ಶೃಂಗಾರಚೇಷ್ಟೆಯನ್ನು ನೀವು ಆಗ ಗಮನಿಸಲಿಲ್ಲ.

ವಚನ|| ಎಂದು ಸುದರ್ಶನನು ಹೀಗೆ ಹೇಳಿ ಮತ್ತೆ ಆಕೆ ಆ ಸುನಂದೆ, ತನ್ನ ವಲ್ಲಭಂಗೆ- ತನ್ನ ಗಂಡನಿಗೆ, ಅಭಿನವ-ಹೊಸ, ಪುರುಷ -ಮನುಷ್ಯನ ಎಂದರೆ ಸ್ನೇಹಿತನ, ಸಂಗೋಷ್ಠಿ+ಜೊತೆ, ಸಹವಾಸ,

ಸಮನಿಸಿ-ಉಂಟಾಗಿ, ನಿಜ+ಆತ್ಮವಲ್ಲಭನ-ತನ್ನ ಗಂಡನ, ಸುಖಾ+ಅನುಭವಕ್ರೀಡೆಗೆ-ಸುಖವನ್ನು ಪಡೆಯುವ ಕ್ರೀಡೆಗೆ, ಎಡೆವ(ಪ)ಡೆಯದೆ- ಅವಕಾಶವನ್ನು ಪಡೆಯದೆ, ಸಿಡಿಮಿಡಿಕೊಳ್ಳುತ್ತಿರ್ಪ-ಕೋಪಗೊಳ್ಳುತ್ತಿದ್ದ ("ಗುರ್" ಎನ್ನುತ್ತಿದ್ದ), ಭಾವಮನ್-ಭಾವವನ್ನು, ಆ ವಿನಯದಾಳಿಯುಂ-ಆ ಸೇವಕನು, ಮತಿಗೆ-ಚಂಡಶಾಸನನ ಬುದ್ಧಿಗೆ, ಪ(ಹ)ತ್ತಿಸುವಂತೆ-ಚೆನ್ನಾಗಿ ಹಿಡಿಸುವಂತೆ, ನುಡಿದು-ಹೇಳಿ, ಮನದ-ಚಂಡಶಾಸನನ ಮನಸ್ಸಿನಲ್ಲಿರತಕ್ಕ, ಪಿಶಾಚಕ್ಕೆ-ಕಾಮವೆಂಬ ಪಿಶಾಚಿಗೆ, ವಚನ ರಚನಾ ಧೂಪಮುಂ- ಮಾತಿನ ಧೂಪವನ್ನೂ- ತೋಱು(ರಿ), ವಿರಹ ವಿಕಾರಮಂ-ಕಾಮ ವಿಕಾರವನ್ನು, ಕೆಳರ್ಚಿ-ಕೆರಳಿಸಿ, ನಿನ್ನೊಳ್-ನಿನ್ನಲ್ಲಿ, ಆಕೆಯುಂ ಆ ಸುನಂದೆಯನ್ನು, ಕೂಡುವ-ಸೇರಿಸುವ, ಉಪಾಯಮನ್-ಉಪಾಯವನ್ನು, ಈಗಳೆ-ಈ ಕ್ಷಣವೆ, ಮಾಡಿದಪೆನ್-ಮಾಡುತ್ತೇನೆ, ಎಂದು ಹೇಳಿ ಆ ಸುದರ್ಶನನು ಪೋ(ಹೋ)ಗಿ, ಬಳಿಕಂ-ಅನಂತರ, ಆ ಧೂರ್ತಂ- ಕಪಟಿ, ಆಡುತ್ತುಂ+ಇರ್ದಂ – ಈ ಮಾತುಗಳನ್ನು ಆಡುತ್ತಿದನು. ಇತ್ತ-ಈಕಡೆ, ವಿರಹಾರ್ಥಂ-ಅಗಲಿಕೆಯಿಂದ, ಬಾಡುತ್ತುಂ+ಇರ್ದಂ-ಬಾಡುತ್ತಿದ್ದನು. ಹೀಗಿರಲು ಒರ್ಮೆ-ಒಂದುಬಾರಿ, ದೀನರ-ಸಾಕಿದ ಮೃಗಗಳಿಂದ, ಬೇಂಟೆಯುಂ-ಬೇಟೆಯನ್ನು ನೋಡಲ್(ಲು), ಬಯಸಿ ಅಪೇಕ್ಷಿಸಿ, ಪೊಱಮಟ್ಟು-ಹೊರಟು ವಸುಷೇಣಂ-ವಸುಷೇಣನು.

೧೫. ವಸುಷೇಣನು ಒಂದುಬಾರಿ ಚಂಡಶಾಸನನೊಡನೆ ಬೇಟೆಗೆ ಹೊರಟನು.

ಪರಿಮಿತ–ಮಿತವಾದ, ವಾಜಿ-ಕುದುರೆ, ವಾರಣ-ಆನೆ, ಪದಾತಿ–ಕಾಲಾಳು, ವರೂಥ-ರಥ ಇವುಗಳ ಕದಂಬ – ಸಮೂಹದಿಂದಲೂ, ಕಾಮಿನೀ-ಹೆಂಗಸರು, ಪರಿಚಿತ-ತಮಗೆ ಚೆನ್ನಾಗಿ ತಿಳಿದ, ರಾಜಪುತ್ರ–ಅರಸುಕುಮಾರರ, ನಿಚಯುಂ-ಸಮೂಹದಿಂದಲೂ ಕೂಡಿ, ಧರಣೀಪತಿ –ದೊರೆಯಾದ ವಸುಷೇಣನು, ಚಂಡಶಾಸನಂ ಬೆರಸು-ಚಂಡಶಾಸನನ್ನು ಕೂಡಿಕೊಂಡು, ವನಾಂತದೊಳ್-ಕಾಡಿನಕೊನೆಯಲ್ಲಿ, ತೆರೆಯು-ಮರೆಯು ತೋಪಿನ-ಉದ್ಯಾನದ, ಸೋಹಿನ–ಹೆಜ್ಜೆಯಗುರುತಿನ, ನೀರ–ನೀರಿನ,

ಬೇಂಟೆಯು–ಬೇಟೆಯ, ಉರ್ವರೆಗಳಂ–ಪ್ರದೇಶಗಳನ್ನು, ಈಕ್ಷಿಸುತ್ತೆ–ನೋಡುತ್ತ, ಬರೆ–ಬರಲಾಗಿ, ಮುಂತಣ–ಮುಂದಿದ್ದ, ಚೂತವನ–ಮಾವಿನ ತೋಪಿನ, ಅಂತರಾಳದೊಳ್-ನಡುವೆ,

೧೯. ಅಲ್ಲಿ ಜಿಂಕೆಯೊಂದು ಇವರ ಕಣ್ಣಿಗೆ ಬಿತ್ತು.

ಬಿರಿದ+ಎರ್ದೆ–ಬಿರಿದು ಹೋದ ಎದೆ ಎಂದರೆ ವೇಗವಾಗಿ ಹೊಡೆದುಕೊಳ್ಳುತ್ತಿರುವ ಎದೆ, ಬಿಟ್ಟಬಾಯ್, ಅಲರ್ವ–ಅರಳುತ್ತಿರುವ, ನಾಸಿಕೆ-ಮೂಗು, ಪತ್ತಿದ-ಅಂಟಿದ, ಕತ್ತು. ಸುತ್ತಿ-ದುಂಡಾಗಿ, ಕವ್ವರಿಸುವ-ಆಶ್ಚರ್ಯವನ್ನು ಬೀರುವ, ದಿಟ್ಟಿ-ದೃಷ್ಟಿ (ಸಂ), ಕೆತ್ತುವ-ಹೊಡೆದುಕೊಳ್ಳುವ, ಒಡಲ್-ದೇಹ, ಎತ್ತಿದ, ಕಂಠಂ-ಕತ್ತು, ಎಟಿಲ್ವ-ಜೋತಾಡುವ, ಕರ್ಣಂ-ಕಿವಿ, ಉಬ್ಬರಿಸುವ ಉಬ್ಬುತ್ತಿರುವ, ಮೆಯ್ನವಿರ್ - ರೋಮಾಂಚ, ಪನಿವ - ಬೆವರುವ, ಮುಂಬ(ಪ)ದನ್ - ಮುಂದಿನ ಪಾದ, ಒಪ್ಪಿರೆ-ಶೋಭಿಸಲು, ದೀವದೊಳ್-ಬೇಟೆಯಲ್ಲಿ, ಮರಲ್ವ-ಹಿಂದಿರುಗಿದ ಎರಲೆಯ ಜಿಂಕೆಯ, ಭಾವಂ–ಭಾವವು, ಆ ನೃಪೇಂದ್ರನ-ದೊರೆಯಾದ ಚಂಡಶಾಸನನ, ಅಚ್ಚಿಗೆ–ಕಣ್ಣಿಗೆ, ಅಚ್ಚರಿಯಂ-(ಸಂ) ಆಶ್ಚರ್ಯವನ್ನು, ಒಡರ್ಚಿದುದು-ಉಂಟುಮಾಡಿತು.

ವಸುಷೇಣನು ಮಿತಿಯಾದ ಕುದುರೆ ಆನೆ ಕಾಲಾಳು ರಥ ಇವುಗಳಿಂದಲೂ, ಪ್ರಿಯರ ರಾಜಕುಮಾರರ ಸಮೂಹದಿಂದಲೂ ಸೇರಿ ಚಂಡಶಾಸನನನ್ನು ಕೂಡಿಕೊಂಡು ಕಾಡನಡುವೆ ತೋಪಿನ ಸೋಹಿನ ನೀರಿನ ಬೇಟೆಯ ಸ್ಥಳಗಳನ್ನು ನೋಡುತ್ತ ಬರಲು ಮುಂದಿದ್ದ ಮಾವಿನ ತೋಪಿನ ನಡುವೆ ಹೊಡೆದುಕೊಳ್ಳುತ್ತಿದ್ದ ಎದೆ ಬಿಟ್ಟಬಾಯಿ ಅರಳುತ್ತಿರುವ ಮೂಗು ಅಂಟಿಕೊಂಡ ಗೋಣು ಆಶ್ಚರ್ಯವನ್ನು ಬೀರುವ ಕಣ್ಣುಗಳು ಹೊಡೆದುಕೊಳ್ಳುತ್ತಿದ್ದ ದೇಹ ಎತ್ತಿದ ಕತ್ತು ಜೋತಾಡುವ ಕಿವಿ ಉಬ್ಬಿದ ಪುಳಕಗಳು ಬೆವರಿನಿಂದ ಕೂಡಿದ ಮುಂದಿನ ಹೆಜ್ಜೆ ಇವುಗಳಿಂದ ಕೂಡಿ ಬೇಟೆಯಿಂದ ಹಿಂದಿರುಗಿದ ಜಿಂಕೆಯ ಭಾವ ಚಂಡಶಾಸನನ ಕಣ್ಣುಗಳಿಗೆ ಆಶ್ಚರ್ಯವನ್ನುಂಟು ಮಾಡಿತು.

ವಚನ|| ಅದಂ-ಆ ಜಿಂಕೆಯನ್ನು, ಕಂಡು, ಚಂಡಶಾಸನನ್(ನು), ಅಂತರ್ಗತದೊಳ್-ಮನಸ್ಸಿನಲ್ಲಿ, ಇಂತು+ಎಂದಂ-ಈ ರೀತಿ ನುಡಿದನು.

೨೦. ಚಂಡಶಾಸನನು ತನ್ನ ಅವಸ್ಥೆಯನ್ನು ಆ ಜಿಂಕೆಗೆ ಹೋಲಿಸಿಕೊಂಡನು.

ಹರಿಣೀಲೋಚನೆ-ಜಿಂಕೆಯಂತೆ ಕಣ್ಣುಳ್ಳ ಆ ಸುನಂದೆ, ದೀವಂ-ಬೇಟೆಯನ್ನು ಹಿಡಿಯಲು ಸೆಳೆಯಾಗಿ ಬಳಸುವ ಪ್ರಾಣಿ, ಆಂ-ನಾನು, ಹರಿಣನೆಂ-ಬೇಟೆಯಾಡುವ ಜಿಂಕೆಯಾಗಿದ್ದೇನೆ. (ಹರಿಣ ಎಂಬ ನಾಮಪದದ ಮೇಲೆ 'ಎಂ' ಎಂಬ ಆಖ್ಯಾತ ಪ್ರತ್ಯಯ ಸೇರಿ ಕ್ರಿಯಾಪದದ ಅರ್ಥವನ್ನು ಕೊಟ್ಟಿದೆ.) ಈ ಬೀಡು-ಈ ಬಿಡಾರ, ಇದು ಪೆರ್ಗಾಡು-ಈ ದೊಡ್ಡಕಾಡು (ಪಿರಿದು+ಕಾಡು.) ಬಿಣ್ಪರಿಗಳ್-ಈ ದೊಡ್ಡ ಬಲೆಗಳು, ನನ್ನ ಕತ್ತಿಗೆ ಉರುಲಾಗಿರುವ ನೇಣ್ಪರಿಗಳ್-ಹಗ್ಗದ ಬಲೆಗಳು. ಶಂಬರಾರಿ-ಮನ್ಮಥನು, ಶಬರಂ-ಬೇಡ. ಪುಲ್ಲಂಬು-ಅವನಬಾಣ, ಕೆಲ್ಲಂಬು-ಹರಿತವಾದ ಬಾಣ. ಮದ್ವಿರಹಾವಸ್ಥಿತಿ-ಈ ನನ್ನ-ವಿರಹದ ಸ್ಥಿತಿ, ಗೋರಿಗೆ-ಮೋಸದಿಂದ ಆಕರ್ಷಿಸುವ ಸ್ಥಿತಿಗೆ, ಓರಗೆ-ಸಮಾನ, ಎನಿಪ್ಪಂತೆ ಎನ್ನುವ ಹಾಗೆ, ಆದುದು. ಎಂತಾಗಿಯುಂ-ಹೇಗೆ ಆದರೂ, ನೆರೆಯಲ್ ತೀರದು-ಅವಳೊಡನೆ ಸೇರಲು ಸಾಧ್ಯವಿಲ್ಲ. ಗೋರಿ-ಈ ಆಕರ್ಷಣೆ ಸಾಯದು+ಎನವೇ (ಬೇ)ಡ, ಮುಗಿಯಿತೂ ಎಂದು ಹೇಳಬೇಡ. ಏಕೆಂದರೆ, ಈ ನೋವೆ-ಸುನಂದೆಯನ್ನು ಚಿಂತಿಸಿ ಅವಳನ್ನು ಪಡೆಯದೆ ಅನುಭವಿಸುತ್ತಿರುವ ಈ ಸಂಕಟವೇ ನನ್ನ ಭಾಗಕ್ಕೆ ಸಾವಲ್ಲವೆ-ಸಾವಿಗೆ ಸಮನಲ್ಲವೆ ?

ಈ ಸುನಂದೆಯೇ ಬೇಟೆಯನ್ನು ಹಿಡಿಯಲು ಸೆಳೆಯಾಗಿ ಉಪಯೋಗಿಸುವ ಪ್ರಾಣಿ. ನಾನೇ ಬೇಟೆಯಾಡಿಸಿಕೊಳ್ಳಲು ಸಿದ್ಧನಾಗಿ ನಿಂತಿರುವ ಆ ಜಿಂಕೆ. ಈ ದೊಡ್ಡ ಕಾಡೇ ಬೀಡು. ಬೇಟೆಯಲ್ಲಿ ಉಪಯೋಗಿಸುವ ದೊಡ್ಡ ಬಲೆಗಳೇ ನನ್ನ ಕತ್ತಿಗೆ ಉರುಲಾಗಿ ಪರಿಣಮಿಸಿರುವ ಹಗ್ಗದ ಬಲೆಗಳು. ಮನ್ಮಥನೇ ಬೇಡ, ಅವನ ಹೂಬಾಣವೇ ನನ್ನ ಎದೆಗೆ ಒಡ್ಡಿರುವ ಹರಿತವಾದ ಬಾಣ. ನನ್ನ ವಿರಹದ ಸ್ಥಿತಿ ನನ್ನನ್ನು ಮೋಸದಿಂದ ಆಕರ್ಷಿಸುವ ಸ್ಥಿತಿಗೆ ಸಮನಾಯಿತು. ಏನೇ ಆದರೂ

ಸುನಂದೆಯೊಡನೆ ಕೂಡಲು ಸಾಧ್ಯವಿಲ್ಲ. ಈ ಮೋಸದ ಆಕರ್ಷಣೆ ಮುಗಿಯಿತು ಎನ್ನಬೇಡ. ಏಕೆಂದರೆ ಅವಳನ್ನು ಪಡೆಯದೆ ನಾನು ಅನುಭವಿಸುತ್ತಿರುವ ಈ ಸಂಕಟವೆ ನನ್ನಭಾಗಕ್ಕೆ ಸಾವಲ್ಲವೆ ?

ವಚನ|| ಹೀಗೆಂದುಕೊಂಡು ಚಂಡಶಾಸನನು, ಆ ವಿನೋದಮಂ–ಆ ಬೇಟೆಯ ವಿನೋದವನ್ನು, ನೀಡುಂ–ಬಹುಕಾಲ, ನೋಡಿ, ಪೊಗೞ್ದು–ಹೊಗಳಿ, ಪೋಪುದುಂ–ಹೋಗಲು, ಅರಸಂ–ದೊರೆಯಾದ ವಸುಷೇಣನು "ಅರಸಿವೆ(ಬೆ)ರಸು –ರಾಣಿಯಾದ ಸುನಂದೆಯೊಡನೆ, ಬೋನವುಂ–ಊಟವನ್ನು (ಭೋಜನ. ಸಂ), ನಂದನವನಕ್ಕೆ- ಉದ್ಯಾನವನಕ್ಕೆ, ಬರವೇ(ಪೇ)ೞ್–ಬರುವಂತೆ ಹೇಳು'' ಎಂದು ಅಪ್ಪಣೆ ಮಾಡಿ, ಸೂೞಾಯ್ತರಂ-ದೂತರನ್ನು, ಅರಮನೆಗೆ ಕಟ್ಟಿಪಿ-ಕಳುಹಿಸಿ, ಕಾಪುಗಾಡಿನೊಳ್ -ಬೇಟೆಯ ಮೃಗವನ್ನು ರಕ್ಷಣೆಮಾಡಿದ ಕಾಡಿನಲ್ಲಿ, ಸೋಹಿನ ಬೇಂಟೆಯ, ಬಿಸದದಿಂ-ವಿನೋದವೆ ಕಾರಣವಾಗಿ, ಈರ್ವರ-ಇಬ್ಬರ, ರಥಮುಂ-ರಥಗಳು, ಬೇಱಿವೇಱಾದಲ್ಲಿ (ಬೇ)-ಬೇರೆಬೇರೆಯಾಗಲು, ಚಂಡಶಾಸನಂ-ಚಂಡಶಾಸನನು, ವಸುಷೇಣನ, ಅರಸಿ-ರಾಣಿ, ಬರ್ಪ-ಬರುವ, ಬಟ್ಟೆ(ವರ್ತ್ಮ, ಸಂ)ಯ+ಅತ್ತನೆ-ದಾರಿಯ ಕಡೆಯಲ್ಲಿಯೆ, ಸಾರ್ದುಕೊಂಡು+ಇರ್ಪನಂ-ಸಮೀಪದಲ್ಲಿಯೇ ಸೇರಿಕೊಂಡಿರಲಾಗಿ, ಇತ್ತ ಪರಿಮಿತ-ಮಿತಿಯುಳ್ಳ ಅಂಗರಕ್ಷಕ(ರಿಂದ)ಪರೀತೆಯುಂ-ಸುತ್ತುವರಿದವಳೂ, ಪರಿಧಾವತ್-ಮುಂದೆ ಓಡುತ್ತಿರುವ, ಕತಿಪಯ-ಕೆಲವರೇ ಆದ, ಚೇಟಿಕಾ ಚೇಟಿಯರ, ಪುರೋಭಾಗಿಯುಂ-ಮುಂಭಾಗವುಳ್ಳವಳೂ (ಎಂದರೆ ಚೇಟಿಯರು ಮುಂದೆ ಹೋಗುತ್ತಿದ್ದರು ಎಂದು ಭಾವ.) ದೋಲಾದಂಡಿಕೋಭಯಭಾಗ-ಡೋಲಿಯ ಎರಡು ಭಾಗದಲ್ಲಿದ್ದವರೊಡನೆ, ಸಂಭಾಷಿತ-ಮಾತನಾಡತಕ್ಕ, ಸಹಚರೀಯುಗಳೆಯುಂ-ಇಬ್ಬರುಸಖಿಯರೊಡಗೂಡಿದವಳೂ, ಆಗಿ, ನಿಜವಲ್ಲಭಂ-ತನ್ನ ಗಂಡನು, ಅಟ್ಟಿದ-ಹೇಳಿ ಕಳುಹಿಸಿದ, ಬೞಿಗೆ-ಸ್ಥಳಕ್ಕೆ, ಬರುತ್ತುಂ+ಇರ್ದ-ಬರುತ್ತಿದ್ದ, ಸುನಂದಾದೇವಿಯುಂ- ಸುನಂದಾದೇವಿಯನ್ನು ಚಂಡಶಾಸನನು ಕಂಡು.

೨೧. ಚಂಡಶಾಸನನು ಸುನಂದೆಯನ್ನು ಅಟ್ಟಿಬಂದನು.

ಕಡೆಗಣ್ಗಳ್‌ಕಣ್ಣ-ಕಡೆಯ ದೃಷ್ಟಿ, ಪರಿದೆಯ್ದಿ-ದೂರ ಹರಿದು, ಮತ್ತೆ, ಮನಂ-ಮನಸ್ಸು, ಅಂಗ+ಉಪಾಂಗ ಸಂಗಕ್ಕೆ-ಸುನಂದೆಯೊಡನೆ ಕೂಡುವುದಕ್ಕೆ, ದಾಟಿಡೆ - ದಾಳಿಮಾಡಲು, ಕಾಯ್ದು - ತಾಪಗೊಂಡ, ಅಳ್ಕಿರ್ದ ಹೆದರಿದ ಮನಸ್ಸು, ಗೂಡುವಾ(ಪಾ)ಯೆ-ಒಟ್ಟಾಗಿ ಮುನ್ನು ಗ್ಗಲು, ಪಿರಿದೊಂದು-ಹೆಚ್ಚಾದ ಒಂದು, ಔತ್ಕಂಟ್ಯದಿಂ ಕುತೂಹಲದಿಂರ, ಕಂಠದೊಳ್-ಕತ್ತಿನಲ್ಲಿ, ಮಿಡುಕು-ದುಃಖರ ಅತಿಶಯ, ಉಣ್ಮುತ್ತಿದ-ಹೊರಹೂರಡುತ್ತಿರಲು. ಮೇಲ್ವಾ(ಪಾ)ಯ್ದು-ಮೇಲೆ ಹಾಯ್ದು, ಭರಿದಿಂದಂ-ವೇಗವಾಗಿ, ನಲ್ಲಳ-ಪ್ರಿಯಳ, ಆಂದೋಳದಿಂ- ಪಲ್ಲಕ್ಕಿಯಿಂಡ ಕಡುಕಯ್ಯಂ - ಆ ವೀರನು, ತೆಗೆದಿಟ್ಟುಕೊಂಡು, ರಥದೊಳ್(ದಲ್ಲಿ) ಮನೋವೇಗದಿಂ-ಮನಸ್ಸಿನವೇಗದಿಂದ, ಬಂದಂ ಬಂದನು.

ಚಂಡಶಾಸನನ ಕಡೆಗಣ್ಣುಗಳು ಸುನಂದೆಯ ಕಡೆಗೆ ಹರಿದವು. ಮನಸ್ಸು ಅವಳ ಅಂಗಸಂಗಕ್ಕೆ ದಾಳಿಟ್ಟಿತು. ಕಾಯ್ದು ಎದೆ ಗೂಡುವಾಯಿತು. ಔತ್ಸುಕ್ಯದಿಂದ ಕಂಠದಲ್ಲಿ ಮಿಡುಕುಂಟಾಯಿತು. ಹೀಗಾಗಿ ಅವನು ಸುನಂದೆಯ ಪಲ್ಲಕ್ಕಿಯ ಮೇಲೆ ಹಾಯ್ದು ಮನೋವೇಗದಿಂಡ ಅವಳನ್ನು ತನ್ನ ಪಟ್ಟಣಕ್ಕೆ ಕರೆದುತಂದನು.

ವಚನ || ಕರುಳಕತ್ತರಿ-ಸಂಬಂಧವನ್ನು ಕತ್ತರಿಸತಕ್ಕವನು, ನಂಟರ ಮಾರಿ-ಬಂಧುಗಳಿಗೆ ಮೃತ್ಯು, ತುತ್ತು ಮಿಂಚಿದೊಡೆ-ಸುಖವಾದ ಊಟ ದೊರಕಲು(?), ಒಡನುಂಡು ವಸುಷೇಣನ ಜೊತೆಯಲ್ಲಿ ಊಟ ಮಾಡಿ ಮತ್ತೆ ತೊಡೆ, ಮಿಂಚಿದೊಡೆ ಕಾಣಿಸಿಕೊಳ್ಳಲು, ಆಖಳಂ ಆ ದುಷ್ಟನು, ಅಂತು ಆ ರೀತಿಯಲ್ಲಿ ಸುನಂದೆಯನ್ನು ಪಿಡಿದು+ಒಯ್ವಾಗಳ್-ಹಿಡಿದುಕೊಂಡು ಹೋಗುವಾಗ, ಉರಗಂ ಪಿಡಿದಂತೆ-ಹಾವು ಹಿಡಿದಹಾಗೆ, ಬೆದಱಿ-ಹೆದರಿ, ಪಾವುಪಿಡಿದಂತೆ-ಹಾವುಕಚ್ಚಿದಂತೆ, ಒದಱಿ (ರಿ), ಕಡುಜರಂ ಕಟ್ಟುಜೀರಿಗೆಹುಳ, ಪತ್ತಿದಂತೆ-ಹತ್ತಿದ ಹಾಗೆ ಎಂದರೆ ಕಡಿದಂತೆ, ಠಕ್ಕು-ಮೋಸ, ಪತ್ತಿದಂತೆ-ಅಮರಿದ ಹಾಗೆ, ಮತಿಗೆಟ್ಟು-ಬುದ್ಧಿಕೆಟ್ಟು ; ಸಿಡಿಲ್(ಲು) ಪೊ(ಹೊ)ಡೆದಂತೆ, ಹಮ್ಮು ಧಮ್ಮಂ ಭೋ(ಪೋ)ಗಿ - ಮೂರ್ಛೆಹೋಗಿ, ಸುನಂದೆಯಾಗಿಯು-ಎನಿಸಿಕೊಂಡಿದ್ದರೂ, ಅಸುನಂದೆ-ಪ್ರಾಣವು ನಂದಿದಂತಾಗಲು, ಕಿಱಿದಾನುಂ-ಸ್ವಲ್ಪ,

ಬೇಗದಿಂ-ವೇಗದಿಂದ, ಬಟಿಕ್ಕೆ-ಅನಂತರ, ಕಾಮನ ಕಾಂಡದಿಂದ, ಖಂಡಿತ-ಕತ್ತರಿಸಿ ಹೋದ, ಹೃದಯಂ-ಹೃದಯವುಳ್ಳ, ವಿಶ್ವಾಸ-ವಸುಷೇಣನು ತನ್ನಲ್ಲಿಟ್ಟಿದ್ದ ನಂಬಿಕೆಗೆ, ಘಾತಕಂ-ಘಾತಕವನ್ನುಂಟು ಮಾಡಿದ, ಚಂಡಶಾಸನಂ ಚಂಡಶಾಸನನು, ಕಾತರತೆಯಿಂ-ಕಾತರತೆ ಯಿಂದ, ಪಿಡಿದುದಂ-ಹಿಡಿದುದನ್ನು, ಅಱಿದು-ತಿಳಿದು,

೨೨. ಈ ಮುಂದಿನ ನಾಲ್ಕು ಪದ್ಯಗಳಲ್ಲಿ ಚಂಡಶಾಸನನು ಸುನಂದೆಯನ್ನು ಕೊಂಡೊಯ್ಯುತ್ತಿರುವಾಗ ಆಕೆ ಗೋಳಿಟ್ಟುದನ್ನು ವರ್ಣಿಸಿದೆ. ಇದನ್ನು ಓದುತ್ತಿರುವಾಗ ರಾವಣನ ಕೈಗೆ ಸಿಕ್ಕಿ ಸೀತೆ ಗೋಳಾಡಿದುದು ನೆನಪಿಗೆ ಬರುತ್ತದೆಯಲ್ಲವೆ? ಈ ಭಾಗವನ್ನು ಓದಿ ದಾಗ ನಾಗಚಂದ್ರನ ವಾಣಿಯ ಘೋಷ ನಮ್ಮ ಕಿವಿಯಲ್ಲಿ ಕೇಳಿಬರು ತ್ತದೆ. ಈ ಭಾಗವನ್ನು ಪಂಪರಾಮಾಯಣದ ಸೀತಾಪಹರಣದ ಭಾಗ ದೊಡನೆ ಹೋಲಿಸಿ.

ಇನನಂ ವಂಚಿಸಿ-ನನ್ನ ಪ್ರಿಯನನ್ನು ಮೋಸಮಾಡಿ, ಅವಂ+ಚಂಡಶಾಸನನ್-ಆ ಚಂಡಶಾಸನನು, ಇಂದು-ಈಗ, ಎನ್ನ-ನನ್ನ, ನಾಥನಂಗನೆಯ-ಗಂಡನ ಹೆಂಡತಿಯಾದ, ಸುನಂದೆಯಂ-ಸುನಂ ದೆಯನ್ನು, ಕಳ್ದೊಯ್ದಪಂ-ಕದ್ದೊಯ್ಯುತ್ತಿದ್ದಾನೆ. ಆದ್ದರಿಂದ ಸುಭಟರೂ ವೀರರೂ ಆದವರು ಅಣ್ಮಿಂ-ಪರಾಕ್ರಮದಿಂದ, ಅಡ್ಡೈಸಿಂ-ಅಡ್ಡಗಟ್ಟಿತಡೆಯಿರಿ. ಊರ-ಊರಿನ, ಮತ್ತು ನಾಡ-ನಾಡಿನ, ಜನಂ, ಜನರು, ಈ ಪೆಣ್‌ಬು(ಪು)ಯ್ಯಲಂ-ಹೆಣ್ಣಿನ ಹುಯ್ಯಲನ್ನು ಎಂದರೆ ಗೋಳನ್ನು, ಎಯ್ದಿಸಿ-ಮುಟ್ಟಿಸಿ. ಹಾ ವಸುಷೇಣನೃಪಾ, ಹಾ ನೃಪ (ರಲ್ಲಿ) ನೀಱ-ಚೆಲುವನೆ, ಎಂದು, ಅಬಲೆ-ಹೆಣ್ಣಾದ, ಆ ಸುನಂದೆ, ಬಾಯ್ವಿ(ಬಿ)ಟ್ಟು, ಅೞ್ತು-ಅತ್ತು, ಹುಯ್ಯಲ್ಚಿದಳ್-ಗೋಳಿಟ್ಟಳು.

ಈ ಚಂಡಶಾಸನನು ನನ್ನ ಪ್ರಿಯನನ್ನು ವಂಚಿಸಿ ಅವನ ಹೆಂಡತಿ ಯಾದ ನನ್ನನ್ನು ಕದ್ದುಕೊಂಡು ಹೋಗುತ್ತಿದ್ದಾನೆ. ಸುಭಟರೂ, ವೀರರೂ ಅಡ್ಡಗಟ್ಟಿ ಇವನನ್ನು ತಡೆಯಿರಿ. ನಾಡಿನ ಮತ್ತು ಊರಿನ ಜನರು 'ನನ್ನ' ಈ ಗೋಳನ್ನು ನನ್ನಗಂಡನಿಗೆ ಮುಟ್ಟಿಸಿ. ಹಾ ವಸು

ಷೇಣನೃಪ, ಹಾ ನೃಪವೀರ ಎಂದು ಅಬಲೆಯಾದ ಸುನಂದೆ ಬಾಯ್ಬಿಟ್ಟು ಅತ್ತು ಗೋಳಾಡಿದಳು.

೨೩. ಪರವೆ(ವೆ)ಣ್ಗೆ—ಪರಸ್ತ್ರೀಗೆ, ಆಟಿಸಿ-ಬಯಸಿ, ಕಳ್ದ-ಕದ್ದು, ಕಾತರನನ್-ಪರಸ್ತ್ರೀವಿಷಯದಲ್ಲಿ ಕಾತರ(ಹೇಡಿ)ನಾದವನನ್ನು, ಅಯ್ಯೋ, ಆರುಂ-ಯಾರು, ಕಾಣರ್, (ರು). ಆರುಂ-ಯಾರು, ಈ ಅಯೋಗ್ಯ ಕೆಲಸ ಮಾಡುತ್ತಿರುವ ಇವನನ್ನು ಕಂಡು, ಕನಲ್ದು-ಕೋಪಗೊಂಡು, ಅರಿದು ಇಕ್ಕರ್-ಕತ್ತರಿಸಿ ಕೊಲ್ಲರಲ್ಲ! ಧರೆ-ಭೂಮಿ, ಇವನನ್ನು, ನುಂಗದೇಂ-ನುಂಗದೇನು? ದಿಗ್ದೇವಿಯರ್-ದಿಕ್‌ದೇವಿಯರು, ನೊಣೆಯರೇ-ನುಂಗರೆ? ಗಿರಿಗಳ್-ಬೆಟ್ಟಗಳು, ಇವನನ್ನು ತಿನ್ನವೇ-ಏನು ತಿನ್ನುವುದಿಲ್ಲವೇ? ಬೆಂದೆನ್-ಹಾಳಾದೆನು; ಅನಾಥೆಯಾದೆನ್-ಅನಾಥೆಯಾದೆನು. ಎ(ನ)ನಗೆ, ಇನ್-ಇನ್ನು, ಆಸೆಆರ್-ದಿಕ್ಕಾರು? ಆರ್‌ಕಾವರ್-ಯಾರುತಾನೆ ಕಾಪಾಡುತ್ತಾರೆ? ಆರ್‌ಶರಣ್-ಯಾರುತಾನೆ ರಕ್ಷಣೆ ಎಂದು ಆ ಕಳಕಂಠನಾದೆ-ಕೋಗಿಲೆಯ ಕಂಠದಂತೆ ಧ್ವನಿಯುಳ್ಳ ಸುನಂದೆ, ಬಸಿಱಂ-ಹೊಟ್ಟೆಯನ್ನು, ಬಾ ರ್ ಪ ಟ್ಟಿ ನ ಂ-ಚರ್ಮಯೋಳುವಂತೆ, ಮೋದಿದಳ್-ಗುದ್ದಿಕೊಂಡಳು.

ಪರಸ್ತ್ರೀಯನ್ನು ಬಯಸಿ ಕದ್ದುಕೊಂಡೊಯ್ಯುತ್ತಿರುವ ಈ ಕಾಮಿಯನ್ನು ಯಾರೂ ಕಾಣರಲ್ಲ! ಅಯ್ಯೋ, ಕೋಪಗೊಂಡು ಇವನನ್ನು ಯಾರೂ ಕೊಂದಿಕ್ಕರಲ್ಲ! ಭೂಮಿ ಇವನನ್ನು ನುಂಗದೇ? ದಿಗ್ದೇವಿಯರು ಇವನನ್ನು ಕಬಳಿಸಬಾರದೆ? ಬೆಟ್ಟಗಳು ಇವನನ್ನು ತಿನ್ನವೇ? ನಾನು ಹಾಳಾದೆ. ನಾಥನಿದ್ದರೂ ಅನಾಥೆಯಾದೆ. ನನಗೆ ಇನ್ನಾರು ದಿಕ್ಕು? ನನ್ನನ್ನು ಕಾಪಾಡುವವರಾರು? ನನಗೆ ಯಾರೂ ತಾನೆ ಶರಣು ಎಂದು ಆ ಸುನಂದೆ ತನ್ನ ಹೊಟ್ಟೆಯನ್ನು ಚರ್ಮಯೋಳುವಂತೆ ಗುದ್ದಿಕೊಂಡಳು.

೨೪. ✓ಸುನಂದೆ ಮತ್ತೆ ಚಂಡಶಾಸನವನ್ನು ಮೂದಲಿಸಿದಳು.

ಮುನಿಸು+ಉಂಟಾದೊಡೆ-ವಸುಷೇಣನಲ್ಲಿ ನಿನಗೆ ಕೋಪವುಂಟಾದ ಪಕ್ಷದಲ್ಲಿ, ಮುಟ್ಟಿ-ಅವನನ್ನು ಸಂಧಿಸಿ, ಮೂದಲಿಸಿ(ಯುದ್ಧಪ್ರಾರಂಭವಾಗುವುದಕ್ಕೆ ಮುಂಚೆ ವೀರರು ಆಡುವ ವೀರಾಲಾಪಗಳಿಗೆ ಮೂದಲಿಕೆ

ಎಂದು ಹೆಸರು), ಬಲ್ಪಿಂ–ಪರಾಕ್ರಮದಿಂದ, ನಿನ್ನಬಾಳ್–ನಿನ್ನ ಕತ್ತಿ, ಆತನ-ಆತನ ಕತ್ತಿಗೆ ತಗುಲಿ, ಆತನ ಬಾಳ್-ಆತನ ಕತ್ತಿ, ನಿನ್ನ, ಕಪಾಲದೊಳ್-ಕೆನ್ನೆಯಲ್ಲಿ, ಮುಱಿದು-ಮುರಿದುಹೋಗಿ, ಮುಂದೆ ಶತ್ರುವಿನ ಮುಂದೆ,ಎಟ್ಟಿರ್ಪ್ಪುದು ಬರತಕ್ಕದ್ದು, ಇನ್ಸೊಪ್ಪುವ-ಶೋಭಿಸುವ, ಆಳ್ತನಮುಂ–ಪರಾಕ್ರಮ. ಹಾಗಲ್ಲದೆ, ಗಂಡರ–ಶೂರರ, ಹಿಂದೆ-ಮರೆಯಲ್ಲಿ, ಸ್ತ್ರೀಬಾಲೆಯಂ-ಹೆಂಗಸು ಹಾಗೂ ಬಾಲೆಯೂ ಆದ ನನ್ನನ್ನು, ಕಳ್ದುದು–ಕದ್ದೊಯ್ಯುವುದು, ಅರಿದೇ–ಅಸಾಧ್ಯವೆ? ಬೂತೆ–ಭೂತವೇ, ಪಾೞ್ಮನೆಯೊಳ್–ಹಾಳುಮನೆಯಲ್ಲಿ, ನಾಯ್–ನಾಯಿ, ಘೃತಭಾಂಡಮಂ–ತುಪ್ಪದ ಪಾತ್ರೆಯನ್ನು, ತೆಗೆವವೊಲ್–ಕೊಂಡೊಯ್ಯುವಂತೆ, ನನ್ನನ್ನು ಕಳ್ದೊಯ್ವುದು–ಕದ್ದು ಒಯ್ಯ ತಕ್ಕದ್ದು, ಆಳ್–ಶೂರರಿಗೆ, ಪಾೞಿಯೆ–ತಕ್ಕ ಕ್ರಮವೆ?

ನಿನಗೆ ವಸುಷೇಣನ ಮೇಲೆ ಕೋಪವುಂಟಾದ ಪಕ್ಷದಲ್ಲಿ ಅವನನ್ನು ಸಂಧಿಸಿ ಮೂದಲಿಸಿ ಪರಾಕ್ರಮದಿಂದ ನಿನ್ನ ಕತ್ತಿ ಆತನ ಕತ್ತಿಯೊಡನೆ ಆತನಕತ್ತಿ ನಿನ್ನ ಕಪಾಲದಲ್ಲಿ ಮುರಿದು ಮುಂದೆ ನುಗ್ಗತಕ್ಕದ್ದು ಶೂರನಿಗೆ ಭೂಷಣ. ಹಾಗಲ್ಲದೆ ಬಾಲೆಯೂ ಹೆಂಗಸೂ ಆದ ನನ್ನನ್ನು ಶೂರನಾದ ನನ್ನ ಗಂಡನ ಹಿಂದೆ ಕದ್ದು ತರುವುದು ಏನು ದೊಡ್ಡದು? ಎಲೆ ಭೂತೆ, ಹಾಳುಮನೆಯಲ್ಲಿ ನಾಯಿ ತುಪ್ಪದ ಪಾತ್ರೆಯನ್ನುಕೊಂಡೊಯ್ಯುವಂತೆ ನನ್ನನ್ನು ಕದ್ದೊಯ್ಯುವುದು ಶೂರನಿಗೆ ತಕ್ಕ ಕ್ರಮವೆ? (ವಸುಷೇಣನಿಲ್ಲದ ಅರಮನೆ ಹಾಳುಮನೆ. ಸುನಂದೆ ತುಪ್ಪದ ಪಾತ್ರೆಯಂತೆ ಶ್ರೇಷ್ಠಳು. ಅದಕ್ಕೆ ಬಯಸತಕ್ಕ ಚಂಡಶಾಸನ ನಾಯಿ. ಯಶೋಧರ ಚರಿತ್ರೆಯಲ್ಲಿ ಪದ್ಯ ಪದ್ಯಕ್ಕೂ ಬರತಕ್ಕ ಹೋಲಿಕೆಗಳು ಇಲ್ಲಿ ಬರುವುದಿಲ್ಲ. ಕತ್ತಲಲ್ಲಿ ಮಿಂಚು ಕ್ಷಣಕಾಲ ಬೆಳಗುವಂತೆ ಆಗೊಮ್ಮೆ ಈಗೊಮ್ಮೆ ಈ ವಿಧವಾದ ಹೋಲಿಕೆಗಳು ಬಂದು ಕಾವ್ಯದ ಸೊಗಸನ್ನು ಹೆಚ್ಚಿಸುತ್ತವೆ.)

೨೫. ಶೂರರು ತಮ್ಮನ್ನು ಕಾಮಿಸಿ ಬಂದ ಹೆಣ್ಣನ್ನೇ ತಿರಸ್ಕರಿಸುತ್ತಾರೆ. ಹೀಗಿರುವಲ್ಲಿ ನೀನು ನನ್ನನ್ನು ಬಯಸುವೆಯಾ ?

ಪರಸ್ತ್ರೀ, ಮನಂ-ಮನಸ್ಸನ್ನು, ಇತ್ತು-ಕೊಟ್ಟು, ಮಾತನಾಡಿದಳು(ಳು), ಅನುವಿಸಿದಳ್-ಅನುಸರಿಸಿದಳು, ಒಲ್ದಪಳ್-ಒಲಿಯುತಾಳೆ, ಎಂದೊಡಂ-ಎಂದರೂ, ಪೊ(ಹೊ)ಲೆಯಾ, ಕೇಳಾ(ಳು). ಪರಾಂಗನೆಗೆ-ಪರಸ್ತ್ರೀಗೆ, ಗಂಡರ್-ಶೂರರು, ಬಯಸುತ್ತಾರೆಯೇ? (ಈ ಪದ್ಯದಲ್ಲಿ ಎರಡು ಮಾತ್ರೆ ಕಡಿಮೆಯಾಗಿ ಪದ್ಯ ಅರ್ಥವಾಗುತ್ತಿಲ್ಲ). ಹಾಗಿರುವಲ್ಲಿ ಮನಂ-ನನ್ನ ಮನಸ್ಸನ್ನು, ಅಱಿಯದೆ-ತಿಳಿಯದೆ, ಎಳೆಯ ಮನಕೆ-ಮನಸ್ಸಿಗೆ, ಸವರುವೆ-ಈ ಕೆಟ್ಟ ಯೋಚನೆಯನ್ನು ತಿಳಿಸುವೆಯಾ?

ಪರಸ್ತ್ರೀ ಮನಸ್ಸು ಕೊಟ್ಟು ಮಾತನಾಡಿ ಅನುಸರಿಸಿ ಪ್ರೀತಿಸಿದಳೆಂದರೂ ಶೂರರು ಅವರಿಗೆ ಮನಸ್ಸನ್ನು ಕೊಡುವುದಿಲ್ಲ. ಹೀಗಿರುವಲ್ಲಿ ನನ್ನ ಮನಸ್ಸನ್ನು ತಿಳಿಯದೆ ಈ ಎಳೆಯ ಮನಸ್ಸಿಗೆ ಈ ಕೆಟ್ಟ ಯೋಚನೆಯನ್ನು ಹತ್ತಿಸುವೆಯಾ?

ವಚನ|| ಎಂದು-ಮೇಲೆ ಹೇಳಿದ ರೀತಿಯಲ್ಲಿ, ಅನೇಕ ಪ್ರಕಾರ (ರೀತಿ)ವಾಗಿ, ಪ್ರಳಾಪ+ಆಕ್ರಂದನಂ-ಗೋಳಿಟ್ಟು ಅಳುತ್ತಿದ್ದ ಸುನಂದೆಯಿಂದ ಕೂಡಿದ, ಸ್ಯಂದನಂ-ಚಂಡಶಾಸನನ ರಥ, ವೇಗದಿಂದೆ, ಊರಂ-ರಾಜಧಾನಿಯನ್ನು, ಸಾರಪ್ಪ ಸಾರಂ-ಹತ್ತಿರಕ್ಕೆ ಹೋಗುವುದನ್ನು ಬಿಟ್ಟು ದೂರಂ+ಆಗಿ ದೂರವಾಗಿ, ಪೋತಪ್ಪಾಗಳ್-ಹೋಗುತ್ತಿರುವಾಗ, ಅವಂ-ಚಂಡಶಾಸನನು, ಸುರಮ್ಯ ವಿಷಯದ-ದೇಶದ, ಕಡೆಯ-ಗಡಿಪ್ರದೇಶದ, ಕಾಪಿಂಗೆ-ರಕ್ಷಣೆಗೆ, ವಸುಷೇಣನ್(ನು), ಇರಿಸಿದ-ಇಟ್ಟಿದ್ದ, ಪೆಸರ-ಹೆಸರು ಪಡೆದ, ಸಾಮಂತಂ-ಸಾವಂತನಾದ, ಸಿಂಹ ಚೂಡಂ-ಸಿಂಹಚೂಡನೆಂಬುವವನು, ತನ್ನ, ಪೊಟಲ-ಪಟ್ಟಣದ, ಪೊಱವೊಟಲ-ಹೊರಪ್ರದೇಶದ, ನಂದನ-ಉದ್ಯಾನದ, ಉಪಾಂತದ-ಸಮೀಪದ, ಗರುಡಿಯೊಳಗೆ, ಪಲಕೆಲಂಬರ್-ಹಲಕೆಲವರು, ಪಲಗೆವಿನ್ನಣಂಗಳೊಡನೆ-ಗುರಾಣಿ ಮುಂತಾದುವುಗಳೊಡನೆ, ಕಾಮನ ಪರ್ವತದಂತೆ, ಮಾರಚಿತ್ರಭಿತ್ತಿಯೊಳ್-ಮನ್ಮಥನ ಚಿತ್ರವನ್ನು ಬರೆದಿದ್ದ ಗೋಡೆಯಲ್ಲಿ, ಪಿಡಿಯುತ್ತುಂ-ಹಿಡಿಯುತ್ತ, ಇರ್ದ-ಇದ್ದ, ಕಡುಗಲಿ-ಶೂರನು, ಕೇಳ್ದು-ಸುನಂದೆಯ ಗೋಳಾಟವನ್ನು ಕೇಳಿ, ನರ-ಕಾಳಾಲು, ತುರಗ-ಕುದುರೆ, ಇವುಗಳ ಬಳ(ಲ)ದ, ನೆರಮನ್-ಸಹಾಯವನ್ನು, ಒಲ್ಲದೆ-ಬಯಸದೆ,

ಸೆರೆಗಿನೊಳಲ್ಲದೆ-ಪರಾಕ್ರಮದಿಂದಲ್ಲದೆ, ಬೆರಗಿನೊಳ್ - ಆಶ್ಚರ್ಯದಲ್ಲಿ, ಸಲ್ಲದೆ–ಸೇರದೆ, ಎಂದರೆ ಆಶ್ಚರ್ಯವನ್ನುಂಟುಮಾಡದೆ, ಕೈಯ–ಕೈಯಲ್ಲಿರುವ, ಪಲಗೆಯೊಳಂ – ಗುರಾಣಿಯಲ್ಲಿ, ಕಟ್ಟಿದ – ಸೊಂಟಕ್ಕೆ ಕಟ್ಟಿದ, ಕಠಾರದೊಳಂ-ಕಠಾರಿಯಲ್ಲಿ, ಪಿ(ಹಿ)ಡಿದ, ಕೂರಸಿಯೊಳಂ (ಕೂರ್+ಅಸಿ)-ಹರಿತವಾದ ಕತ್ತಿಯಲ್ಲಿ, ಎಯ್ದಿ ಸಿ-ಅಲ್ಲಿಗೆ ಹೋಗಿ, ಪ(ಹ)ರಿದು, ಹರಿಣಿಯಂ-ಜಿಂಕೆಯನ್ನು, ಪಿ(ಹಿ)ಡಿದೊಯ್ವ-ಹಿಡಿದು ಕೊಂಡು ಹೋಗುವ, ತರಕ್ಷುವಿನಂತೆ-ಹುಲಿಯಂತೆ, ತರುಣಿಯಂ ಪಿಡಿದುಯ್ವ-ಸುನಂದೆಯನ್ನು ಹಿಡಿದುಕೊಂಡು ಒಯ್ಯುತ್ತಿದ್ದ, ಚಂಡ ಶಾಸನನಂ–ಚಂಡಶಾಸನನನ್ನು ದೂರದೊಳ್(ದಲ್ಲಿ)ಕಂಡು, ಗಜಱಿ ಗರ್ಜಿಸಿ,

೨೬. ಸಿಂಹಚೂಡನು ಚಂಡಶಾಸನನನ್ನು ಧಿಕ್ಕರಿಸಿ ನುಡಿದನು. ಇತ್ತಿತ್ತಲ್-ಈಕಡೆ, ಇದಿರಾಗು, ಅಣ್ಮಣ್ಮು-ಪ್ರರಾಕ್ರಮವನ್ನುತೋರಿಸು. ರಥಮಂ–ರಥವನ್ನು, ಇೞಿ(ಳಿ)ಇೞಿ(ಳಿ), ಕೈದುಕೊಳ್ ಕೈದು ಕೊಳ್-ಆಯುಧವನ್ನು ಧರಿಸು ಧರಿಸು. ಪೋಗದಿರ್-ಓಡಿಹೋಗಬೇಡ. ಎನ್ನಂ ಕಂಡು-ನನ್ನನ್ನು ಕಂಡು, ಸುಭಟರ್-ವೀರರು, ಬೆನ್ನಂ ಕುಡು ವರೆ-ಬೆನ್ನನ್ನು ತೋರಿಸುವರೆ ? ಸಿಂಹಚೂಡಂಗೆ-ಸಿಂಹಚೂಡನಿಗೆ, ಮಾಱೊಡ್ಡಿದ-ಎದುರಿಸಿದ, ವೀರರ್(ರು), ಮತ್ತೆ, ಜೀವಂ ಬೆರಸು, ಉೞಿದರಿಲ್ಲ-ಬದುಕಿದವರಿಲ್ಲ, ಎಂದು–ಹೀಗೆಂದು ನುಡಿದು, ಮುಟ್ಟಿದರ್-ನಿನ್ನನ್ನು ಸಂಧಿಸಿದ, ಲೇಸಕ್ಕೆ–ಒಳ್ಳೆಯದಕ್ಕೆ, ಇದೇ ಪ್ರಾಯಶ್ಚಿತ್ತ. ಮೇಲ್‌ಬಿರ್ದ-ನಿನ್ನ ಮೇಲೆ ಬಿದ್ದ, ಎನ್ನ-ನನ್ನ, ಬಾಹಾಪರಿಘದ-ಲಾಳವಿಂಡಿಗೆಯಂತಿರುವ ತೋಳಿನ, ಬಲೆಯೊಳ್(ಯಲ್ಲಿ), ಸತ್ತೆ-ಸತ್ತುಹೋದೆ,-ಇನ್ನೆವೋ(ಪೋ)ಪೈ-ಎಲ್ಲಿಗೆ ಹೋಗುವೆ ?

ಇತ್ತಕಡೆ ನನ್ನೊಡನೆ ಇದಿರಾಗು. ನಿನ್ನ ಪರಾಕ್ರಮವನ್ನು ತೋರು. ರಥವನ್ನು ಇಳಿ. ಆಯುಧವನ್ನು ಸ್ವೀಕರಿಸು. ಓಡಿಹೋಗಬೇಡ. ಸುಭಟರಾದವರು ನನ್ನನ್ನು ಕಂಡು ಬೆನ್ನು ತೋರಿಸುವರೆ ? ಸಿಂಹಚೂಡನಿಗೆ ಪ್ರತಿಭಟಿಸಿದ ವೀರರು, ಮತ್ತೆ ಜೀವದೊಡನೆ ಉಳಿಯುವರೇ ಎಂದು ನನ್ನನ್ನು ಸಮೀಪಿಸಿದ್ದು ಒಳ್ಳೆಯದಾಯಿತು. ನನ್ನ

ಮೇಲೆ ಬಿದ್ದ ನೀನು ನನ್ನ ಲಾಳವಿಂಡಿಗೆಯಂತಿರುವ ತೋಳಿನ ಬಲೆಯಲ್ಲಿ ಸತ್ತೆ. ಇನ್ನು ಎತ್ತಹೋಗುವೆ ?

ವಚನ|| ಎಂದು-ಈರೀತಿಯಾಗಿ, ಮುಟ್ಟೆ–ಮನಸ್ಸು ಮುಟ್ಟು ವಂತೆ,ಮೂದಲಿಸಿ-ಚುಚ್ಚು ಮಾತನ್ನಾಡಿ, ಕಟ್ಟೆದಿರ್ಗೆ(ಕಡಿದು+ಇದಿರ್) ವಂದು (ಬಂದು)-ನೇರವಾಗಿ ಚಂಡಶಾಸನನ ಎದುರಿನಲ್ಲಿ ಬಂದು, ಮೆಟ್ಟಿ ತಱುಂಬಿದ-ತರುಬಿದ್ದ, ಅಡ್ಡಲಾದ, ಸಿಂಹಚೂಡನಂ–ಸಿಂಹ ಚೂಡನನ್ನು, ಸೂತದ್ವಿತಯನಾಗಿ-ಸಾರಥಿಯೊಡನೆ ಕೂಡಿ, ಪೋಗು ತ್ತುಂ-ಹೋಗುತ್ತ, ಕಂಡು-ಸಿಂಹಚೂಡನನ್ನು ಕಂಡು, ತೇರಂ-ರಥ ವನ್ನು, ನಿಲಿಸಿ-ನಿಲ್ಲಿಸಿ, ಸಾರಥಿಯಂ–ಸಾರಥಿಯನ್ನು, ವಾರಿಜವದನೆಗೆ–ಕಮಲಮುಖಿಯಾದ ಸುನಂದೆಗೆ, ಕಾಪುವೇೞ್ದು-ರಕ್ಷಣೆಯನ್ನು ಹೇಳಿ ಎಂದರೆ ರಕ್ಷಣೆಗಿಟ್ಟು, ಕಿೞ್ತು–ಹಿರಿದ, ಬಾಳೊಳಂ-ಕತ್ತಿಯೊಡನೆ, ಅತ್ತ-ಆ ಕಡೆ ಅಪರದೊಳಂ-ಹಿಂದುಗಡೆಯಿಂದ, ಅವನೀತಳಕ್ಕೆ-ಭೂಮಿಗೆ, ಲಂಘಿಸಿ-ಹಾರಿ, ಚಂಡಶಾಸನಂ(ನು) ಇಂತೆಂದಂ-ಈ ರೀತಿ ಹೇಳಿದನು.

೨೭. ಚಂಡಶಾಸನನು ಸಿಂಹಚೂಡನನ್ನು ಮೂದಲಿಸಿದನು.

ಪೇರಾನೆಯ(ಪಿರಿದು+ಆನೆ)-ದೊಡ್ಡಆನೆಯು (ಇಲ್ಲಿ ಪೇರಾನೆಯು ಎಂದಿರಬೇಕು. ಪ್ರಥಮೆಗೆ ಷಷ್ಠಿ ಬಂದಿದೆ), ಕೈಯ್ಪಿಡಿದ-ಸೊಂಡಲಿ ನಲ್ಲಿ ಹಿಡಿದ, ಕರ್ಬನ್-ಕಬ್ಬನ್ನು, ವಾನರನ್–ಕಪಿ, ಏಂ ಸೆಳೆವುದೆ–ಏನು ಸೆಳೆಯುವುದೇನು ? ಹೀಗಿರುವಲ್ಲಿ ನಾಂ-ನಾನು, ಪಿಡಿದವಳಂ-ಹಿಡಿದವಳನ್ನು, ನೀನೆ, ಬಿಡಿಸುವೆಯಾ ? ಸಾಯದೆ ಪೋ-ಹೋಗು. ನಿನ್ನಿಂ-ನಿನ್ನಿಂದ, ನಿನ್ನ ಪತಿಗೆ-ನಿನ್ನ ಒಡೆಯನಾದ ವಸುಷೇಣನಿಗೆ ಪುಯಲ್‌ಗಳ್-ಹುಯ್ಯಲು ಎಂದರೆ ಗೋಳಾಟ, ಅದೇಂ-ಏಕೆ? (ದೃಷ್ಟಾಂತಾಲಂಕಾರ)

ದೊಡ್ಡ ಆನೆ ಸೊಂಡಲಿನಲ್ಲಿ ಹಿಡಿದಿರುವ ಕಬ್ಬನ್ನು ಕಪಿ ಸೆಳೆಯು ವುದಕ್ಕೆ ಸಾಧ್ಯವೆ. ನಾನು ಹಿಡಿದವಳನ್ನು ನೀನು ಬಿಡಿಸುವೆಯಾ ? ಸಾಯದೆ ಸುಮ್ಮನೆಹೋಗು. ನಿನ್ನ ಪತಿಗಾಗಿ ನೀನೇಕೆ ಗೋಳಾಟ ಮಾಡುವೆ ?

ವಚನ|| ಎಂದ-ಎಂದು ಹೇಳಿದ, ನುಡಿಗೆ—ಮಾತಿಗೆ, ಕಳಕಳಿಸಿ ನಕ್ಕು ಸಿಂಹಚೂಡನ್(ನು), ಇಂತು- ಈ ರೀತಿಯಾಗಿ, ಎಂದಂ- ಹೇಳಿದನು.

೨೮. ವಸುಷೇಣನೃಪನ-ವಸುಷೇಣನೆಂಬ ದೊರೆಯ, ಮುಂದಣ್ಗೆ -ಎದಿರಿನಲ್ಲಿ, ಸುನಂದಾದೇವಿವೆ(ಬೆ)ರಸು–ಸುನಂದಾದೇವಿಯನ್ನು ಒಡ ಗೊಂಡು, ನಿನ್ನಯ—ನಿನ್ನ, ನೆತ್ತರ್—ರಕ್ತ, ಬಸಿವ—ಸುರಿಯುತ್ತಿರುವ, ತಲೆ, ಕಾಣ್ಕೆಯಾಗಿರೆ—ದೊರೆಗೆ ಕೊಡುವ ಕಾಣಿಕೆಯಾಗಲು, ಈ ಸಿಂಹ ಚೂಡಂ(ನು), ಏಂ—ಏನು, ಪೋದಪನೇ-ಹೋಗುವನೇ ? (ನಿನ್ನ ತಲೆ ಯನ್ನೇ ನನ್ನ ದೊರೆಗೆ ಕಾಣಿಕೆಯಾಗಿ ಒಪ್ಪಿಸುತ್ತೇನೆ ಎಂದು ಭಾವ)

ನನ್ನ ಒಡೆಯನಾದ ವಸುಷೇಣನ ಎದುರಿನಲ್ಲಿ ಸುನಂದಾದೇವಿ ಯನ್ನು ಕೊಂಡೊಯ್ದು, ರಕ್ತ ಬಸಿಯುತ್ತಿರುವ ನಿನ್ನ ತಲೆಯನ್ನು ಕಾಣಿಕೆಯಾಗಿ ಒಪ್ಪಿಸದೆ ಈ ಸಿಂಹಚೂಡನು ಸುಮ್ಮನೆ ಬರಿಗಯ್ಯಲ್ಲಿ ಹಿಂದಿರುಗುತ್ತಾನೆಯೇ ?

೨೯. ಸಿಂಹಚೂಡನು ತನ್ನ ಚುಚ್ಚುಮಾತನ್ನು ಮುಂದುವರಿಸು ತ್ತಾನೆ. ಪರವೆ(ಪೆ)ಣ್ಗೆ-ಪರರ ಹೆಂಗಸಿಗೆ, ಆಟಸಿದೊಡೆ ಬಯಸಿದರೆ, ಧರೆ-ಭೂಮಿ, ಆ ದುರ್ನಡತೆಯನ್ನು, ಪೊಱುವುದೆ- ಹೊರುತ್ತದೆಯೇ ? ಈ ಸುನಂದೆಯನ್ನು, ಕಳ್ದೊಯ್ದು-ಕದ್ದೊಯ್ದು, ಕೂಡಿ—ನಿನ್ನ ಜೊತೆ ಯಲ್ಲಿಯೇ, ತಂದಯ್—ಕರೆದುತಂದೆ. ನಲ್—ಒಳ್ಳೆಯ, ಮಾನಸ ನಾದ-ಮನುಷ್ಯನಾದ, ನೀನು ಚಂಡಶಾಸನ (ಚಂಡ-ದುಷ್ಟರನ್ನು, ಶಾಸನ—ಶಿಕ್ಷಿಸತಕ್ಕವನು)ನೆಂಬ, ಪೆ(ಹೆ)ಸರಂ—ಹೆಸರನ್ನು, ಚಂಡಾಲ— ಹೊಲೆಯ, ನೀರೊಳ್ ನೀರಿನಲ್ಲಿ, ಇಂತು—ಈ ರೀತಿಯ ಕೆಟ್ಟಕೆಲಸ ಮಾಡಿ. ಅರ್ದುವರೇ-ಅದ್ದುತ್ತಾರೆಯೇ ?(ಅಟ್.ಧಾ. ಮುಳುಗು.)

ಪರಸ್ತ್ರೀಯನ್ನು ಬಯಸಿದವನನ್ನು ಭೂಮಿ ಹೊರುವುದೇ ? ಸುನಂದೆಯನ್ನು ಕದ್ದೊಯ್ದು ನಿನ್ನೊಡನೆ ಕದ್ದುತಂದೆ. ಒಳ್ಳೆಯ ಮನುಷ್ಯನಾದ ನೀನು ಚಂಡಶಾಸನನೆಂಬ ಹೆಸರನ್ನು ನೀರಿನಲ್ಲಿ ಅದ್ದುವರೇನು ?

ವಚನ || ಎನಲೊಡಂ ಎಂದು ಹೇಳಲಾಗಿ, ಚಂಡಶಾಸನನ್ (ನು), ಇಂತು+ಎಂದಂ-ಈರೀತಿ ನುಡಿದನು.

೩೦. ಸಿಂಹಚೂಡನಿಗೆ ಚಂಡಶಾಸನನ ಮೂದಲೆ.

ನೀನ್(ನೂ), ಎ(ನ)ನಗೆ, ಬುದ್ಧಿವೆ(ಪೇ)ೞಲ್-ಬುದ್ಧಿ ಹೇಳಲು, ಇದೇನಪ್ಪೈ-ಅದೇನಾಗುವೆ, ಎಂದರೆ ಅದುನಿನ್ನಿಂದ ಸಾಧ್ಯವೆಂದು ತಿಳಿದಿರುವೆಯಾ? ಬಾಳ-ಕತ್ತಿಯ, ಬಾಯೆ-ಬಾಯಿಂದ, ಪಲ್+ ಕಡಿಸಿಕೊಳಲ್-ಪಲ್ಲುಗಳನ್ನು ನಾಶಪಡಿಸಿಕೊಳ್ಳಲು, ನೀನಾರ್ಪೆ-ನೀನು ಸಮರ್ಥನಾದೆ. ಒದುಕಿದ-ನನ್ನ ಕತ್ತಿಯಿಂದನೀನು ಬದುಕಿದ. ಬೞಿ (ಳಿ)ಕ, ಏನಾದೊಡಂ+ಎನ್ನು-ಯಾವ ಮಾತುಗಳನ್ನಾದರೂ ಆಡು. ಮುನ್ನಂ-ಅದಕ್ಕಿಂತ ಮೊದಲು, ನಿನ್ನ, ಆಯತಂ - ಯೋಗ್ಯತೆ ಶೌರ್ಯವು, ಆಗಾ-ಸಲ್ಲದು ಎಂದರೆ ಆಗದು.

ನೀನು ನನಗೆ ಬುದ್ಧಿ ಹೇಳಲು ಎಷ್ಟರವನು. ನನ್ನ ಕತ್ತಿಯ ಬಾಯಿಯಿಂದ ಪಲ್ಲುಗಳನ್ನು ಉದುರಿಸಿಕೊಳ್ಳಲು ತಕ್ಕವನು ನೀನು. ನನ್ನಿಂದ ಬದುಕಿಹೋದನಮೇಲೆ ಯಾವ ಶೌರ್ಯದ ಮಾತುಗಳ ನ್ನಾದರೂ ಆಡು. ಅದಕ್ಕಿಂತ ಮುಂಚೆ ನಿನ್ನ ಈ ಯೋಗ್ಯತೆಬೀರುವ ಮಾತುಗಳು ಸಲ್ಲವು.

ವಚನ || ಎಂದು, ಒರ್ವರ್-ಒಬ್ಬರು, ಒರ್ವರಂ-ಮತ್ತೊಬ್ಬ ರನ್ನು, ಮೂದಲಿಸಿ, ನುಡಿಯುತ್ತುಂ (ತ್ತಾ), ಇರ್ವರುಂ-ಇಬ್ಬರೂ, ಭೂಮಾನದ-ಒಂದು ಪ್ರಮಾಣದ ಭೂಮಿಯ, ಅಳವಿಯೊಳ್-ಹೋರಾ ಟಕ್ಕಾಗಿ, ಪರಿಯಲ್-ಹರಿದಾಡಲು, ಅನುಗೆಯ್ವಾಗಳ್-ಸಿದ್ಧವಾದಾಗ,

೩೧. ಅಂತು-ಆ ರೀತಿಯಲ್ಲಿ, ಆಕ್ಷಣದೊಳ್-ಆ ಸಮಯದಲ್ಲಿ, ಬೆಳೆದ, ಅಡವಿಯೆ-ಕಾಡೇ, ಕಳನ್ ಆದುದು-ರಣರಂಗವಾಯ್ತು. ಆ ನಳಿನ(ಕಮಲ)ದ-ಕಮಲದ ದಳದಂತೆ, ಈಕ್ಷಣೆಯ-ಕಣ್ಣುಳ್ಳ ಸುನಂ ದೆಯ, ಚಿತ್ತಂ-ಮನಸ್ಸು, ಅರಸು+ಆಯ್ತು-ರಾಜನಂತಾಯಿತು. ಆಶಾ-ದಿಕ್ಕೆಂಬ, ಲಲನೆಯರೆ-ಸ್ತ್ರೀಯರೇ, ನೋಟ್ಪರ್-ನೋಟಕರು, ಆದರು. ಬಳಯುತರ್-ಶೂರರು, ಅರಸಂಕ+ಆದರ್ -ಅರಸಂಕರಾ ದರು.(?)

ಬೆಳೆದಿದ್ದ ಅಡವಿಯೆ ಯುದ್ಧ ಭೂಮಿಯಾಯ್ತು. ಸುನಂದೆಯ ಮನಸ್ಸೇ ರಾಜನ ಸ್ಥಾನವನ್ನು ಪಡೆಯಿತು. ದಿಕ್ಕೆಂಬ ಸ್ತ್ರೀಯರೈ ನೋಟಕರಾದರು. ಶೂರರು ಅರಸಂಕವಾದರು.

ವಚನ || ಆಗಳ್‌–ಆ ಸಮಯದಲ್ಲಿ, ಒಡನೆವ(ಬ)ಂದು-ಜೊತೆಯಲ್ಲಿಯೇ ಬಂದು, ನೋಟ್ಪ–ಸಿಂಹಚೂಡಚಂಡಶಾಸನರ ಕದನವನ್ನು ನೋಡತಕ್ಕ, ನೋಟಕರ್(ರು), ತಮ್ಮೊಳ್–ತಮ್ಮಲ್ಲಿಯೇ, ಇಂತು+ಎಂದರ್– ಈರೀತಿ ಆಡಿಕೊಂಡರು–

೩೨. ಇಳೆಯೊಳಗೆ–ಈ ಲೋಕದಲ್ಲಿ, ಬಗೆವೊಡೆ ಯೋಚಿಸಲಾಗಿ, ಸಿಂಹಚೂಡನು, ಫಲಕಾರಂ–ಸ್ವಾಮಿಯ ಉಪಕಾರವನ್ನು ನೆನೆದು ಅದನ್ನು ತೀರಿಸುವುದರ ಮೂಲಕ ಫಲಕೊಡತಕ್ಕವನು. ಆದರೆ ಭೂತಳದೊಳ್–ಈ ಲೋಕದಲ್ಲಿ, ಚಂಡಶಾಸನಂ–ಚಂಡಶಾಸನನು, ಕೃತಘ್ನನ್–ಕೃತಘ್ನನು ಎಂದರೆ ಮಾಡಿದ ಉಪಕಾರವನ್ನು ಮರೆಯುತಕ್ಕವನು. ಇವರ್– ಈಸಿಂಹಚೂಡ ಚಂಡಶಾಸನರು, ಅತಿಬಳರ್ – ಶೂರರು. ಇರ್ವರ–ಈ ಇಬ್ಬರ, ಸೋಲ(ಲು), ಗೆಲ್ಲ-ಜಯ, ಅರಸನ–ವಸುಷೇಣನ, ಪುಣ್ಯಂ–ಪುಣ್ಯ.

ಸ್ವಲ್ಪಯೋಚನೆ ಮಾಡಿದರೆ ಈ ಲೋಕದಲ್ಲಿ ಸಿಂಹಚೂಡನೇ ಉಪಕಾರಿ. ಚಂಡಶಾಸನನೇ ಕೃತಘ್ನ. ಇವರಿಬ್ಬರೂ ಶೂರರು. ಇವರ ಸೋಲು ಗೆಲುವುಗಳು ದೊರೆಯ ಪುಣ್ಯವನ್ನು ಅವಲಂಬಿಸಿವೆ.

ವಚನ|| ಇತ್ತ-ಈಕಡೆ, ಸುನಂದೆ, ನಿಜ-ತನ್ನ, ಅಂತರ್ಗತವೊಳ್ ಮನಸ್ಸಿನಲ್ಲಿ, ಇಂತು+ಎಂದಳ್-ಈ ರೀತಿಯೋಚಿಸಿದಳು.

೩೩. ಸುನಂದೆ ದಿಕ್ಪಾಲ್ಪಕರನ್ನು ಪ್ರಾರ್ಥಿಸಿಕೊಂಡಳು.

ನೇಸಱ್-ಸೂರ್ಯದೇವ, ನೆಲನೇ ಭೂಮಿತಾಯಿ, ವ್ಯೋಮಮೆ–ಆಕಾಶವೇ, ವಾಯುದೇವ, ಈ ಸಿಂಹಚೂಡ ಭಟನಂ–ಭಟನನ್ನು ತಲೆಯಂ+ಕಾಯಿ-ರಕ್ಷಿಸು. ಈ ದ್ರೋಹನಂ-ಮಿತ್ರದ್ರೋಹಿಯಾದ ಚಂಡ ಶಾ ಸ ನ ನ ನ್ನು, ಪೊಣರ್ಚಿ–ಒಟ್ಟಾಗಿಸೇರಿ, ಪೊ(ಹೊ)ಡೆದಿಕ್ಕಿ. ಸೆಱೆಯಿಂದಂ–ಚಂಡಶಾಸನನ ಈ ಬಂಧನದಿಂದ, ತಪ್ಪಿದಂದು–ತಪ್ಪಿದಾಗ, ಎನ್ನನ್–ನನ್ನನ್ನೇ, ಆಂ–ನಾನು, ನಿಮಗೆ ಬಲಿಗೆಯ್ವೆಂಬಲಿ-

ಕೊಟ್ಟು ಕೊಳ್ಳುತ್ತೇನೆ, ಎಂದು, ವ್ಯೈಕೊರಗಿ-ವ್ಯೈಕುಗ್ಗಿ, ಸುಯ್-ನಿಟ್ಟುಸಿರು, ಕಯ್‌ಗಣ್ಮೆ-ಮೀರಿಮೀರಲು ಕಣ್‌ಕೆಟ್ಟು-ಕಣ್ಣು ಕಾಣದೆ, ಕೋಟಲೆಗೊಂಡು-ಸಂಕಟಗೊಂಡು, ಅಳ್ಕೆರ್ದ-ಹೊಡೆದುಕೊಳ್ಳುತ್ತಿದ್ದ ಎದೆ, ಡಕ್ಕವಾ(ಪಾ)ಯ್ದು-ಡಕ್ಕೆ (ವಾದ್ಯ) ಯಂತೆ ಹೊಡೆದುಕೊಳ್ಳಲು, ಸತಿ-ಆ ಹೆಣ್ಣು, ನಿಂದು-ನಿಂತು, ಔತ್ಸುಕ್ಯಮಂ-ಉತ್ಕಂಠತೆಯನ್ನು, ತಾಳ್ದಿದಳ್-ತಾಳಿದಳು.

ಈ ಶೂರನಾದ ಭಟನು ತಲೆಯನ್ನು ಕಾಯಿ. ನೀವೆಲ್ಲಾ ಒಟ್ಟಾಗಿ ಈ ದ್ರೋಹನನ್ನು ಹೊಡೆದಿಕ್ಕಿರಿ. ಸೂರ್ಯನೇ, ಭೂತಾಯಿ, ಆಕಾಶವೇ, ಸೆರೆಯಿಂದ ನಾನು ಬಿಡುಗಡೆ ಹೊಂದಿದೊಡನೆಯೇ ನನ್ನನ್ನೇ ನಿಮಗೆ ಬಲಿಕೊಟ್ಟುಕೊಳ್ಳುತ್ತೇನೆ ಎಂದು ಆಕೆ ವ್ಯೈಕುಗ್ಗಿ ಮಿತಿ ಮೀರಿ ನಿಟ್ಟುಸಿರುಬಿಟ್ಟು, ಕಣ್ಗೆಟ್ಟು ಸಂಕಟದಿಂದ ಎದೆಹೊಡೆದುಕೊಳ್ಳಲು ಸುನಂದೆ ಮುಂದೆ ಏನಾಗುವುದೊ ಎಂದು ಕುತೂಹಲವನ್ನು ತಾಳಿದಳು.

ವಚನ|| ತತ್‌ಸಮಯದೊಳ್-ಆಸಮಯದಲ್ಲಿ, ಸಿಂಹಚೂಡಂ(ನು),

೩೪. ಅಂಜದೆ-ಹೆದರದೆ, ನಿಂದು(ತು), ಎಲೆ, ಕಂಜ-ಕಮಲದ, ದಳ-ದಳದಂತೆ, ಆಯತ ವಿಸ್ತಾರವಾದುವೂ, ಮತ್ತು ವಿಲೋಲ-ಚಂಚಲವೂ ಆದ, ಲೋಚನೆ-ಕಣ್ಣುಳ್ಳವಳೆ ಎಂದರೆ ಚೆಲುವೆಯೆ, ಅವಧರಿಸು-ಗಮನವಿಟ್ಟು ಕೇಳು. ಮುಂ-ಮೊದಲು, ಪಗೆಯಂ-ಶತ್ರುವನ್ನು, ಜವ(ಯಮ.ಸಂ.)ನ-ಯಮನ, ಎಡೆಗೆ ಸಮೀಪಕ್ಕೆ, ಒಪ್ಪಿಸಿ, ಬಟಿಯಂ-ಅನಂತರ, ಜನಪತಿಯ+ಎಡೆಗೆ, ರಾಜನ ಸಮೀಪಕ್ಕೆ, ನಿನ್ನನ್(ನ್ನು), ಒಯ್ದು, ಒಪ್ಪಿಸುವೆಂ ಒಪ್ಪಿಸುತ್ತೇನೆ.

ಆ ಸಮಯದಲ್ಲಿ ಸಿಂಹಚೂಡನು ಹೆದರದೆ ನಿಂತು ಈ ರೀತಿ ನುಡಿದನು. ಎಲೆ ಚೆಲುವೆ, ಗಮನವಿಟ್ಟು ಕೇಳು. ಮೊದಲು ಈ ಹಗೆಯಾದ ಚಂಡಶಾಸನನನ್ನು ಯಮನಿಗೆ ಒಪ್ಪಿಸಿ, ಬಳಿಕ ನಿನ್ನನ್ನು ವಸುಷೇಣನಿಗೆ ಒಪ್ಪಿಸುತ್ತೇನೆ.

ವಚನ|| ಎಂದು-ಮೇಲೆ ಹೇಳಿದ ರೀತಿಯಲ್ಲಿ, ಅವಷ್ಟಂಭಂ-ದರ್ಪ, ಎಸೆಯೆ-ಶೋಭಿಸಲು,

೩೫. ಸಿಂಹಚೂಡನ ತಲೆ ಕೆಳಕ್ಕೆ ಬಿತ್ತು.

ಬಲದೊಳ್-ಬಲಭಾಗದಲ್ಲಿ, ಪತ್ತಿದ,ಅಂಟಿಕೊಂಡ, ಮುಂಡಿ-ಆಯುಧ, ಚವ್ಮ್ರಟಿಗೆ-ಚಾವಟಿ, (ಚರ್ಮಪಟ್ಟಿಕಾ. ಸಂ.), ಕೈವೀಣಂ-ಆಯುಧ ವಿಶೇಷ, (ಕೃಪಾಣ? ನೇಣ?) ಬೆಡಂಗಾಗೆ-ಬೆಡಗನ್ನು ಎಂದರೆ ಕಾಂತಿಯನ್ನುಂಟುಮಾಡಲು, ಮೆಯ್ಗಲಿ ಆ ಶೂರನು ಪೊಕ್ಕು, ಪ್ರವೇಶಿಸಿ, ಎತ್ತಿದ, ಒಡ್ಡಣದ-ಸೈನ್ಯದಿಂದ, ಕೈಗೊಂಬ-ಆಕ್ರಮಿಸುವ, ಆಳದಿಂ-ಶೌರ್ಯದಿಂದ, ಪೋದ ಸಿಂಹಚೂಡನ ಬಳಿಗೆ ಹೋದ, ಭೂಪನ್-ಚಂಡಶಾಸನನು, ಮೆಯ್+ಅಲಗಂ+ಪೆತ್ತಿರೆ ದೇಹದಲ್ಲಿ ಕತ್ತಿಯನ್ನು ಹೊಂದಿರಲು. ಬಾಹುಪೂರಕದೆ-ತೋಳನ್ನು ಪೂರ್ತಿಯಾಗಿ ಬೀಸಿ, ಆ ವೀರನಂ-ಆ ಸಿಂಹಚೂಡನನ್ನು, ತಲೆಯುಂ-ತಲೆಯೂ, ಮುಂಡಮುಂ-ಮುಂಡವೂ, ಒರ್ಮೆ-ಒಂದೇ ಬಾರಿಗೆ, ಪಲಗೆಯೊಳ್-ಗುರಾಣಿಯಲ್ಲಿ, ಬಯ್ಚಿಟ್ಟಪ್ಪಾಲ್-ಬಚ್ಚಿಟ್ಟಂತೆ, ಬೀೞ್ವಿನಂ ಬೀಳುವಂತೆ, ಪೊಯ್ದಂ-ಹೊಡೆದನು.

ಸಿಂಹಚೂಡನ ಬಲಭಾಗದಲ್ಲಿ ಚವ್ಮ್ರಟಿಗೆ ಮೊದಲಾದ ಆಯುಧಗಳು ಶೋಭಿಸುತ್ತಿದ್ದವು. ಆ ಶೂರನಾದ ಸಿಂಹಚೂಡನು ಚಂಡಶಾಸನನ ಮೇಲೆ ಸೈನ್ಯನಡೆಸಿ ಅವನನ್ನು ಆಕ್ರಮಿಸಿಕೊಳ್ಳುವ ಶೌರ್ಯದಿಂದ ನಡೆದನು. ಕತ್ತಿಯನ್ನು ಧರಿಸಿದ್ದ ಚಂಡಶಾಸನನು ತನ್ನ ತೋಳನ್ನು ಪೂರ್ತಿಯಾಗಿ ಬೀಸಿ ತಲೆಯೂ ಮುಂಡವೂ ಒಂದೆ ಬಾರಿಗೆ ಗುರಾಣಿಯಲ್ಲಿ ಬಚ್ಚಿಟ್ಟು ಬೀಳುವಂತೆ ಆ ಸಿಂಹಚೂಡನನ್ನು ಹೊಡೆದನು.

ವಚನ|| ಅಂತು-ಆ ರೀತಿಯಲ್ಲಿ, ಪೊಯ್ದು-ಹೊಡೆದು, ಪಾ(ಹಾ)ಯ್ದು, ಸಾರಥಿಯು, ಚೋದನಾವೇಗದಿಂ-ರಥವನ್ನು ನಡೆಸುವ ವೇಗದಿಂದ, ಗಾಳಿಗೆ, ಗಱು(ರಿ)ಮೂಡಿದಂತೆ, ಮನಕ್ಕೆ-ಮನಸ್ಸಿಗೆ, ಮಡ ಮೊಗೆದಂತೆ-ಹಿಮ್ಮಡಿಹುಟ್ಟಿದಂತೆ, ಮುಹೂರ್ತಮಾತ್ರದಿಂ-ಮುಹೂರ್ತ ಮಾತ್ರದಲ್ಲಿಯೇ, ತನ್ನ, ದುರ್ಗಮುಂ-ಕೋಟೆಯನ್ನು, ಪೊಕ್ಕನ್-ಹೊಕ್ಕನು. ಅನ್ನೆಗಂ-ಅಷ್ಟರಲ್ಲಿಯೇ, ಇತ್ತಲ್ ಈ ಕಡೆ,

೩೬. ಬೇಟೆಯಿಂದ ಬಂದ ವಸುಷೇಣನು ರಸಾಳೋದ್ಯಾನವನ್ನು ಹೊಕ್ಕನು.

ತರವೇ(ಪೇ)ಟ್ಟು-ತರುವಂತೆ ಹೇಳಿ, ಅಟ್ಟಿದ-ಹೇಳಿ ಕಳುಹಿಸಿದ, ಬೋನಂ-ಭೋಜನ(ಸಂ), ಆಗಳೆ-ಈಗಾಗಳೇ, ರಸಾಳೋದ್ಯಾನಮಂ-ಮಾವಿನ ಉದ್ಯಾನವನ್ನು ಪೊಕ್ಕುದು-ಹೊಕ್ಕಿತು. ಅರಸಂ-ದೊರೆ, ಇನ್ನು ಏಕೆ ಬಾರನೊ? ಚಂಡಶಾಸನನ್(ನು), ಅದೆತ್ತಲ್(ಲು), ಪೋದನೋ-ಹೋದನೋ, ದೇವಿಯುಂ-ಸುನಂದೆಯೂ, ಬರುತುಂ - ಬ ರು ತ್ತ, ಆಕೆಯ ಅಂಗರಕ್ಕರ್ - ಅಂಗರಕ್ಷಕರು ತಳ್ವಿದರ್ - ತಡಮಾಡಿದರು. ನೀಂ-ನೀವು, ಇದಿರ್ವೋಗಿಂ-ಇದಿರಾಗಿ ಹೋಗಿ, ಎನ್ನುತ್ತುಂ-ಎನ್ನುತ್ತ, ಮಹತ್ತರರ್ - ಅರಮನೆಯ ಸರ್ವಾಧಿಕಾರಿಗಳು, ಇರ್ಪ+ಅನ್ನೆಗಂ-ಅಷ್ಟರಲ್ಲಿಯೇ, ಅವನೀನಾಥಂ-ದೊರೆ, ತದುದ್ಯಾನಮಂ - ಆ ಉದ್ಯಾನವನ್ನು ಕುರಿತು, ಎಯ್ದೆವ (ಬ)ಂದನ್-ಬಂದನು.

ಹೇಳಿ ಕಳುಹಿಸಿದ ಊಟ ಮಾವಿನವನವನ್ನು ಬಂದುಸೇರಿತು. ದೊರೆ ಇನ್ನೂ ಏಕೆ ಬಾರನೋ? ಚಂಡಶಾಸನನು ಎತ್ತ ಹೋದ? ರಾಣಿ ಸುನಂದಾ ದೇವಿ ಬರುತ್ತ ಆಕೆಯ ಅಂಗರಕ್ಷಕರು ತಡಮಾಡಿದರು ಇದಿರಾಗಿ ಹೋಗಿ ನೀವು ಎಂದು ಗೃಹಮಹತ್ತರರು ಹೇಳುತ್ತಿರುವಷ್ಟ ಲ್ಲಿಯೇ ವಸುಷೇಣನು ಆ ಉದ್ಯಾನವನಕ್ಕೆ ಬಂದನು.

ವಚನ ॥ ಬಂದು-ಹಾಗೆ ಬಂದು, ವಸುಷೇಣನು, ವರೂಥದಿಂದೆ-ರಥದಿಂದೆ, ಇಟಿ(ಳಿ)ದು, ಭೋಜನಶಾಲಿನಿಕಾಯಮಾನ-ಊಟದ ಮನೆಯ ಬಳಿ ಗುಂಪಾಗಿ, ಪ್ರತಾನ-ಕೊಂಬೆಯಿಂದ ಕೂಡಿ, ಸಂಫುಲ್ಲ-ಚೆನ್ನಾಗಿ ಅರಳಿದ, ಮಲ್ಲಿಕಾ-ಮಲ್ಲಿಗೆಯ, ಮಂಡಪದ-ಮಂಟಪದ ಮುಂದೆ ನಿಂದು (ತು),

೩೭. ವಸುಷೇಣನು ಪ್ರಿಯತಮೆಯಾದ ಸುನಂದೆಗಾಗಿ ಕಳಕಳಿ ಯಿಂದ ನುಡಿದನು.

ದೇವಿ, ಬಂದಳೇ? ಪಂಕ್ತಿಗೆ-ಭೋಜನದ ಪಂಕ್ತಿಗೆ, ಎಡೆಮಾಡಿಸಿದಪ್ಪಳೆ-ಅವಕಾಶವನ್ನು ಕಲ್ಪಿಸಿರುವಳೆ, ಚಂಡಶಾಸನಂ-ಚಂಡಶಾಸನನು, ಬಂದನೆ ಎಂದು, ಮಂದಿರದ-ಮನೆಯ, ಮಹತ್ತರರಂ-ಮಹತ್ತರರನ್ನು, ನೃಪಂ-ದೊರೆ, ಬೆಸಗೊಳ್ವಿನಂ-ಕೇಳಲಾಗಿ, ಅಷ್ಟರಲ್ಲೇ, ಶ್ಲಥ-ಬಿಚ್ಚಿಹೋದ ಎಂದರೆ ಕೆದರಿದ, ಕೇಶಪಾಶಂ-ತಲೆಗೂದಲುಳ್ಳ (ಪಾಶ-ಹಗ್ಗ), ಆಕ್ರಂದಿತ-ಅಳುತ್ತಿರುವ, ವಕ್ತ್ರಂ-ಮುಖವುಳ್ಳ, ಆಹತ-ಹೊಡೆ

ಯಲ್ಪಟ್ಟ, ಕೃಶ+ಉದರಂ-ತೆಳುವಾದ ಹೊಟ್ಟೆಯುಳ್ಳ, ಆಕಳಿತ-ಬೀಳುತ್ತಿರುವ, ಅಶ್ರುಲೋಚನಂ-ಕಣ್ಣೀರಿನಿಂದ ಕೂಡಿದ ಕಣ್ಣುಳ್ಳ, ಚೇಟಿಕಾ-ಚೇಟಿಯರ ಮತ್ತು ಸಹಚರೀಜನಮುಂ-ಸಖೀಜನರು, ಬಂದುದು. ಸುನಂದೆ ಬರಲಿಲ್ಲ ಎಂದು ಭಾವ.

ವಸುಷೇಣನು 'ದೇವಿ ಬಂದಳೆ ? ಭೋಜನಕ್ಕೆ ಅವಕಾಶವಾಡಿರುವಳೇ ? ಚಂಡಶಾಸನನು ಬಂದನೇ ?' ಎಂದು ಗೃಹಮಹತ್ತರರನ್ನು ಕೇಳಿದನು. ಅಷ್ಟರಲ್ಲೇ ಬಿರಿಹೊಯ್ದ ಕೂದಲು, ಅಳುತ್ತಿರುವ ಮುಖ, ಹೊಡೆದುಕೊಳ್ಳುವ ಹೊಟ್ಟೆ, ಇಳಿಯುತ್ತಿರುವ ಕಣ್ಣೀರು ಇವುಗಳಿಂದ ಕೂಡಿದ ಚೇಟಿಯರೂ ಸಖಿಯರೂ ಬಂದರು.

ವಚನ || ಅಂತು ಆ ರೀತಿಯಲ್ಲಿ, ಶೋಕರಸಮೆ-ಶೋಕರಸವೇ, ರೂಪಮಂ+ಕೊಂಡಂತೆ-ಆಕಾರವನ್ನು ತಳೆದಂತೆ, ಬರ್ಪ-ಬರತಕ್ಕ, ನಿಜ-ತನ್ನ, ಅಗ್ರಮಹಿಷೀ-ಪಟ್ಟದ ರಾಣಿಯ, ಪರಿಜನಮಂ-ಪರಿವಾರದವರನ್ನು, ದೂರದೊಳ್(ದಲ್ಲಿ), ಕಂಡು, ಇದು ಏನೆಂದು, ಅತಿ ಚಕಿತ-ತುಂಬ ಆಶ್ಚರ್ಯಗೊಂಡ, ಚಿತ್ತನುಂ-ಮನಸ್ಸುಳ್ಳವನೂ, ವಿಸ್ಫಾರಿತ-ಅರಳಿದ, ವಿಲೋಚನನುಂ-ಕಣ್ಣುಳ್ಳವನೂ, ಉದ್‌ಬದ್ಧ-ಮೇಲಕ್ಕೆ ಎತ್ತಿಕಟ್ಟಿದ, ಭ್ರೂಲತಾಮೂಲನುಂ-ಹುಬ್ಬಿನ ಮೂಲವುಳ್ಳವನೂ, ಉತ್ತಾನಿತ ಕರಪತಾಕನುಂ-ಚಾಚಿದ ಬಾವುಟದಂತೆ ಉದ್ದವಾದ ಕೈಯುಳ್ಳವನೂ, ಆಗುತ್ತುಂ-ಆಗುತ್ತ, ಇರೆ-ಇರುತ್ತಿರಲು-

೩೮. ಪರಿಜನರು ಅಳುತ್ತ ಬಂದರು.

ಹಾ ಲಲಿತಾಂಗಿ, ಹಾ ಕುಸುಮ (ಹೂ) ಕೋಮಳೆ (ಮೃದುವಾಗಿರುವವಳು) ಹಾ ನೀಲ(ಕಪ್ಪು)ಸರೋಜಲೋಚನೆ, ಸುನಂದೆ, ನೃಪೇಂದ್ರನ (ರಾಜನ) ರಾಜ್ಯಲಕ್ಷ್ಮಿ, ಭೂಪಾಲನ (ದೊರೆಯ) ಭಾಗ್ಯಲಕ್ಷ್ಮಿ, ವಸುಷೇಣನ ಮಂಗಳಲಕ್ಷ್ಮಿ (ಯಾಗಿದ್ದ ನೀನು), ರಾಜರಲ್ಲಿ ಚಂಡಾಲನಂತಿರುವ ಚಂಡಶಾಸನನ, ಬಾಹುರಾಹುಗಿಳನಂ-ತೋಳೆಂಬ ರಾಹುವಿನಿಂದ ನುಂಗುವಿಕೆ, ನಿನಗೆ ಎತ್ತಣಿಂ-ಎಲ್ಲಿಂದ, ಎತ್ತ ಬಂದುದೋ !

ವಚನ || ಎಂದು, ಬಾಯಱಿದು-ಗೋೞಿಟ್ಟು, ಅೞುತ್ತುಂ-ಅಳುತ್ತ, ಬಂದು, ಮುನ್ನಡಿಯೊಳ್-ಪಾದದಲಲ್ಲಿ, ಕೆಡೆದುಂ-ಬಿದ್ದು, ಪುಡಿಯೊಳ್-ಹುಡಿಯಲ್ಲಿ, ಪೊರಳ್ವ-ಹೊರಳುವ, ವಿಲಾಸಿನಿಯರ, ಸಮೂಹ(ಗುಂಪು)ದೊಳಗೆ, ರಾರಾಜಿತ-ಹೊಳೆಯುವ, ರತ್ನದ, ಪಾದುಕಾ-ಪಾದುಕೆಗಳ, ಗ್ರಾಹಿಣಿಯಪ್ಪ-ಧರಿಸುವ, ಬಾಲಕಿ+ಆದೊರ್ವಳ್-ಆ ಒಬ್ಬ ಬಾಲಿಕೆ, ದೇವರ್-ಸ್ವಾಮಿ, ಅಟ್ಟಿದ-ಕಳುಹಿಸಿದ, ಬೞಿಗೆ-ಸ್ಥಳಕ್ಕೆ, ಬರುತ್ತುಂ, ಇರೆ-ಸುನಂದಾದೇವಿ ಬರುತ್ತಿರಲು, ಚಂಡಶಾಸನಂ(ನು), ಕಂಡು, ಎೞ್(ಳೆ)ದು, ಪಿ(ಹಿ)ಡಿದು, ಕೈಸೆಱೆ(ರೆ) ವಿ(ಪಿ)ಡಿದು, ಬಂದಿಕಾರನಂತೆ, ಕೊಂಡುಪೋದಂ-ಅವರನ್ನು ತೆಗೆದುಕೊಂಡು ಹೋದನು.

೩೯. ಚಂಡಶಾಸನನ ವರ್ತನೆಯನ್ನು ಪರಿಜನರು ವಸುಷೇಣನಿಗೆ ತಿಳಿಸಿದರು.

ದೇವಿಯರ್ಗೆ-ದೇವಿಯವರಿಗೆ ಎಂದರೆ ಸುನಂದಾದೇವಿಗೆ, ಎಡೆಗುಡದೆ-ಅವಕಾಶಕೊಡದೆ, ಅಡ್ಡೈಸಿದ-ಅಡ್ಡಿಪಡಿಸಿದ, ಅಂಗರಕ್ಕರಂ-ಅಂಗರಕ್ಷಕರನ್ನು, ಪಡಲಿಡೆ-ಚದುರುವಂತೆ, ಪೊಯ್ದಂ-ಹೊಯ್ದನು. ಎಮ್ಮುಂ-ಪರಿಜನರಾದ ನಮ್ಮನ್ನು, ಕಿಱಿದು+ಎಡೆಯುಂ-ಸ್ವಲ್ಪ ದೂರ, ಕೊಂಡೊಯ್ದು, ನಡೆಗೆಟ್ಟ ಬೞಿಕ ನಮ್ಮ ನಡೆಕೆಟ್ಟನಂತರ ಎಂದರೆ ದಾರಿತಪ್ಪಿದ ಬಳಿಕ, ಆ ನಿಸ್ತ್ರಿಂಶಂ-ಆ ಕಟುಕನು, ಬಿಟ್ಟನ್-ಬಿಡುಗಡೆ ಮಾಡಿದನು.

ಸುನಂದಾದೇವಿ ಚಂಡಶಾಸನನ ವಶವಾಗಲು ಅವಕಾಶಕೊಡದೆ ಅಡ್ಡಗಟ್ಟಿದ ದೇವಿಯ ಅಂಗರಕ್ಷಕರನ್ನು ಚದುರುವಂತೆ ಹೊಯ್ದನು. ನಮ್ಮನ್ನು ಹಿಡಿದುಕೊಂಡೊಯ್ದು ಸ್ವಲ್ಪದೂರ ಕರೆದುಕೊಂಡು ಹೋಗಿ ನಮ್ಮ ನಡೆಗೆಟ್ಟ ಮೇಲೆ ಆ ಕಟುಕನು ನಮ್ಮನ್ನು ಬಿಟ್ಟು ಬಿಟ್ಟನು.

೪೦. ಈ ವಿಷಯವನ್ನು ಕೇಳಿದ ವಸುಷೇಣನು ಮೂರ್ಛೆಗೊಂಡನು.

ಎನೆ-ಹೀಗೆಂದು ನುಡಿಯಲು- ಕೇಳ್ದು-ಸುನಂದೆಯ ಅಪಹರಣ ವನ್ನು ಕೇಳಿ, ಉಕ್ಕಿದ-ಮೇಲೆದ್ದು ಹೊತ್ತಿಕೊಂಡ, ಕೋಪವಹ್ನಿಗೆ-ಕೋಪವೆಂಬ ಬೆಂಕಿಗೆ, ವಿಯೋಗ+ಉದ್ರೇಕ-ಸುನಂದೆಯ ಅಗಲಿಕೆಯ ಉದ್ರೇಕವೆಂಬ, ಶೋಕಪ್ರಭಂಜನಸಂತಾನಂ-ಶೋಕವೆಂಬ ವಾಯು ವಿನ ಸಮೂಹವು, ಅಳುರ್ಕೆಯಂ-ಆಧಿಕ್ಯವನ್ನು ಪಡೆದು, ಕಿಂ ಕರ್ತ ವ್ಯತಾಮೂಢಂ - ಮುಂದೆ ಮಾಡುವ ಕರ್ತವ್ಯವೇನೆಂಬುದನ್ನು ತಿಳಿಯದೆ ಮೂಢನಾದ ವಸುಷೇಣನು, ಒಂದಿನಿಸುಂ - ಒಂದು ಸ್ವಲ್ಪ, ಜೀವಿತ-ಬದುಕುವಿಕೆಯಲ್ಲಿ, ಶಂಕೆ-ಅನುಮಾನವನ್ನು, ಭೋಂಕ ನೆಱದು-ತಕ್ಷಣವೆ ತಿಳಿದು, ಅಳ್ಳಾಡುತ್ತುಮಿರ್ದ-ತೂಗಾಡುತ್ತಿದ್ದ, ಆತ್ಮ -ತಮ್ಮ, ನಾಥನಂ-ಸ್ವಾಮಿಯನ್ನು, ಆಪ್ತರ್-ಆಪ್ತರು ಹಾಗೂ ಸಚಿವರ್-ಮಂತ್ರಿಗಳು, ನಿಜ+ಅಂಕುಶ-ತಮ್ಮ ಅಂಕುಶದಿಂದ, ತಿರೋಧಾನ+ ಆವಿಲಂ-ತಿರುಗಿಸಿದವರಾಗಿ, ಮಾಡಿದರ್(ರು).

ಹೀಗೆಂದು ವಸುಷೇಣನಲ್ಲಿಗೆ ಬಂದವರು ಸುನಂದೆಯ ಅಪಹರ ಣದ ಕಥೆಯನ್ನು ಹೇಳಲು, ಮೇಲೆದ್ದ ಕೋಪವೆಂಬ ಬೆಂಕಿಗೆ ಸುನಂ ದೆಯ ಅಗಲಿಕೆಯ ಸಂಕಟದ ಗಾಳಿ ಸೇರಿ ಅತಿಶಯವನ್ನು ಪಡೆದು ಮುಂದೆ ಮಾಡಬೇಕಾದ ಕರ್ತವ್ಯವನ್ನು ತಿಳಿಯದೆ ವಸುಷೇಣನು ಮೂಢನಂತಿದ್ದನು. ಅವನ ಬದುಕುವಿಕೆಯಲ್ಲಿಯೇ ಅನುಮಾನ ಮೂಡಿತು. ಇದನ್ನು ಕಂಡು ಅವನ ಆಪ್ತರೂ ಸಚಿವರೂ ಅವನನ್ನು ಆಸ್ಥಿತಿಯಿಂದ ಹಿಂದಿರುಗಿಸಿದರು.

೪೧. ಶಿಶಿರೋಪಚಾರಗಳಿಂದ ವಸುಷೇಣನು ಮೂರ್ಛೆ ತಿಳಿದನು.

ಮಲಯರುಹದ - ಶ್ರೀಗಂಧದ, ಕರ್ಪೂರದ - ಪಚ್ಚಕರ್ಪೂರದ, ಪಳುಕಿನ-ಹಳುಕಿನ, ಪನಿನೀರು – ನೀರಿನಹನಿಗಳು, ಕದಳಿದಳದ-ಬಾಳೆಯ ಎಲೆಗಳ, ಇಱಿಸಿಲು-ಗುಂಡಿಯಲ್ಲಿಟ್ಟ ತಣ್ಗೆಳಸದ-ತಂಪಾದ ನೀರುಳ್ಳ ಕಲಶದ, ಶೀತಳತೆಯಿನ್-ಶಿಶಿರೋಪಚಾರದಿಂದ, ಅವನಿ ಪನನ್-ದೊರೆಯನ್ನು, ಆಪ್ತರ್-ಅವನ ಆಪ್ತರು, ಉಜ್ಜೀವಿಸಿದರ್-ಮೂರ್ಛೆತಿಳಿಯುವಂತೆ ಮಾಡಿದರು.

ಶ್ರೀಗಂಧದ, ಪಚ್ಚಕರ್ಪೂರದ ಹಳುಕಿನ ತೊಟ್ಟಿಕ್ಕುತ್ತಿರುವ ನೀರಿನಿಂದಲೂ, ಬಾಳೆಯ ಎಲೆಯಿಂದ ಸುತ್ತುವರಿದ ತಂಪಾದ ಕಳಸದ ತಿಳಿ ನೀರಿನ ತಂಪಿನಿಂದ ದೊರೆಯ ಆಪ್ತರು ಅವನಿಗೆ ಜೀವಬರುವಂತೆ ಮಾಡಿದರು.

ಅಂತು-ಮೇಲೆ ಹೇಳಿದ ರೀತಿಯಲ್ಲಿ, ಪರಾಮರ್ಶಿತ-ಉಪಚಾರಗೊಂಡ, ಹೃದಯನ್+ಆದ ಹೃದಯವುಳ್ಳವನಾದ, ನೃಪಜನಂ-ದೊರೆಯನ್ನು, ಅವನ ನರ್ಮಸಚಿವರ್(ರು)ಇಂತು-ಈ ರೀತಿಯಲ್ಲಿ, ಎಂದರ್-ನುಡಿದರು.

೪೨. ನರ್ಮ ಸಚಿವರು ದೊರೆಗೆ ಧೈರ್ಯ ಹೇಳಿದರು–

ಧರಿತ್ರೀಪಾಲ–ಭೂಮಿಯನ್ನು ಪಾಲಿಸುವುದವವರಲ್ಲಿ, ಚೂಡಮಣೀ-ಶ್ರೇಷ್ಠನೇ, ಮದವತ್-ಕೊಬ್ಬಿದ, ವೈರಿಕುಲಂ-ಶತ್ರುಗಳ ಸಮೂಹ, ಭವತ್-ನಿನ್ನ, ಭುಜ-ತೋಳಿನಲ್ಲಿ ವಿಭಾಸ್ವತ್–ಹೊಳೆಯುವ, ಖಡ್ಗಧಾರಾ–ಖಡ್ಗದ ಬಾಯಿಯಿಂದ ಉಂಟಾಗಿ ಹರಿಯುವ ರಕ್ತದ, ನದೀನದೊಳ್-ನದನದಿಗಳಲ್ಲಿ, ಮುನ್ನ–ಈ ಮೊದಲು, ಮುಲುಂಕದೆ-ಮುಳುಗುವಂತಾಗದೆ, ಉದ್ಧತರ-ಕೊಬ್ಬಿದ ನಿನ್ನ ಶತ್ರುಗಳ, ದುರ್ಗಂ-ಕೋಟೆ, ನಿನ್ನ, ಕೋಪದ ಮತ್ತು ಪ್ರತಾಪದ (ಶೌರ್ಯದ) ದವದ-ಕಾಡುಕಿಚ್ಚಿನ, ಜ್ವಾಳೆಗಳಿಂ-ಜ್ವಾಲೆಗಳಿಂದ, ಮುಲುಂಕದೆ-ಮುಳುಗುವಂತಾಗದೆ, ವೃಥಾ ವ್ಯರ್ಥವಾಗಿ, ಶೋಕವೆಂಬ, ಅಬ್ಧಿಯೊಳ್-ಸಮುದ್ರದಲ್ಲಿ, ಭೀರುವಂದದೆ-ಹೆದರಿದವನಂತೆ, ನೀನ್(ನು), ಇಂತು-ಈ ರೀತಿಯಲ್ಲಿ ಎದೆಗೆಟ್ಟವನಂತೆ, ಮುಲುಂಕಲ್ ಅಪ್ಪುದೆ-ಮುಳುಗಿದವನಂತಾಗುವುದೇ ?

ಕೊಬ್ಬಿದ ವೈರಿಗಳ ಸಮೂಹ ನಿನ್ನ ತೋಳಿನಲ್ಲಿ ಹೊಳೆಯುತ್ತಿರುವ ಖಡ್ಗದ ಧಾರೆಯಿಂದ ಉಂಟಾದ ರಕ್ತದ ನದಿಯಲ್ಲಿ ಮುಳುಗದೆ ಕೊಬ್ಬಿದವೈರಿಗಳ ಕೋಟೆ ನಿನ್ನ ಕೋಪವೆಂಬ ಪ್ರತಾಪದ ಕಾಡುಕಿಚ್ಚಿನಿಂದ ಮುಳುಗದೆ ಹೇಡಿಯಂತೆ ಅರಸೇ ನೀನು ಈಗ ವ್ಯರ್ಥವಾಗಿ ಶೋಕ ಸಮುದ್ರದಲ್ಲಿ ಮುಳುಗಿರುವುದು ತಕ್ಕುದೆ ?

ಆ ಪ್ರತಿಬೋಧನ-ಎಚ್ಚರಗೊಳಿಸಿದ, ವಚನಂ-ಮಾತು, ವಲ್ಲಭಾ-ಹೆಂಡತಿಯ, ವಿಯೋಗ-ಅಗಲಿಕೆಯ, ವೈಕ್ಲಬ್ಯ–ವಿಕಾರವೆಂಬ, ವಲ್ಮೀಕ-ಹುತ್ತದಲ್ಲಿ, ಸುಪ್ತ-ಮಲಗಿದ, ಕೋಪ(ವೆಂಬ)ವ್ಯಾಳ-ಸರ್ಪವನ್ನು, ಪತ್ಯುತ್ಥಾಪನ-ಮೇಲೆಬ್ಬಿಸುವ, ದಂಡಂ+ಆಗೆ-ಕೋಲಿನಂತಾಗಲು, ಧರಾಧಿನಾಥಂ-ದೊರೆ, ಇಂತು-ಈ ರೀತಿಯಲ್ಲಿ, ಎಂದಂ-ನುಡಿದನು

೪೩. ವಸುಷೇಣನು ಧೀರಪ್ರತಿಜ್ಞೆಯನ್ನು ಮಾಡುತ್ತಾನೆ-

ಬಂಡಣದೊಳ್-ಯುದ್ಧದಲ್ಲಿ, ಪೆಂಡಿರ್-ಹೆಂಡಂದಿರು ಮತ್ತು ಭಂಡಾರಂ-ಭಂಡಾರವು, ಪೋದೊಡೆ-ನಾಶವಾಗಿ ಹೋದರೆ, ಅದು, ವಿಧಾತೃವಶಂ-ವಿಧಿವಶ. (ಬ್ರಹ್ಮನು ಹಣೆಯಲ್ಲಿ ಬರೆದಂತಾಗುತ್ತದೆ ಹಾಗಾದ ಪಕ್ಷದಲ್ಲಿ ಆ ವಿಷಯ ಬಲ್ಗಂಡಂಗೆ-ಶೂರನಿಗೆ, ಸಂತಸೊಕಂ·(ಸುಖ. ಸಂ>ಸೊಕ)-ಸಂತೋಷವನ್ನು ತರುವ ಸುಖವನ್ನುಂಟು ಮಾಡುತ್ತದೆ. ಆದು ಬಿಟ್ಟು ಆ ಪೆಂಡತಿ-ಆ ನನ್ನ ಹೆಂಡತಿ, ಕೋಳ್ಪಟ್ಟು-ಸೆರೆಸಿಕ್ಕಿರಲು, ಮಗುಳೆ - ಮತ್ತೆ, ಪೊಟಿಲಂ-ಪಟ್ಟಣವನ್ನು, ಪುಗುವೆನೆ-ಪ್ರವೇಶಿಸಿಸುತ್ತೇನೆಯೇ ?

ಯುದ್ಧದಲ್ಲಿ ಸತ್ತು ಹೆಂಡಂದಿರು ಭಂಡಾರ ಇವು ಹೋದರೆ ಅವು ನಮ್ಮ ಹಣೆಯ ಬರಹ. ಶೂರನಾದವನಿಗೆ ಅದು ಸುಖವನ್ನು ತರುತಕ್ಕದ್ದೇ. ಆದರೆ ಹೆಂಡತಿ ಸೆರೆ ಸಿಕ್ಕಿರುವಾಗ ನಾನು ನನ್ನ ಪಟ್ಟಣವನ್ನು ಅವಳಿಲ್ಲದೆ ಮರಳಿ ಪ್ರವೇಶಿಸುತ್ತೇನೆಯೇ ?

೪೪. ಶತ್ರುಗಳನ್ನು ಕೊಂದ ಮೇಲೆಯ ನನಗೆ ಊಟ.

ಪ್ರಾಣಪ್ರಿಯಳಿಲ್ಲದೆ-ನನಗೆ ಪಾಣದಂತೆ ಪ್ರಿಯಳಾದ ಸುನಂದೆ ಇಲ್ಲದೆ, ನಿಃಪ್ರಾಣಂ- ಪ್ರಾಣವಿಲ್ಲದಂತಾಗುತ್ತದೆ. ಈವೊಡಲ್-ಈ ದೇಹ, ಈಗಳ್-ಈಗ, ಅದೆಂತು+ಉಣ್ಬುದು–ಹೇಗೆ ತಾನೆ ಊಟಮಾಡುವುದು, ಅಹಿತ-ಶತ್ರುಗಳ, ಪ್ರಾಣಾನಿಲನಿಂದೆ-ಪ್ರಾಣವೆಂಬ ವಾಯುವಿನಿಂದ, ಎನ್ನ-ನನ್ನ, ಕೃಪಾಣ-ಕತ್ತಿ ಎಂಬ, ಅಹಿಯನ್-ಸರ್ಪವನ್ನು ಊಡಿ-ಊಟಮಾಡಿಸಿ, ಬಱಿಕಂ-ಅನಂತರ, ಆನ್-ನಾನು, ಉಂಡಪೆಂ-ಊಟಮಾಡುತ್ತೇನೆ.

ನನ್ನ ಪ್ರಾಣಪ್ರಿಯಳಾದ ಸುನಂದೆ ಇಲ್ಲದ ಬಳಿಕ ನನ್ನ ದೇಹ ಪ್ರಾಣವಿಲ್ಲದ್ದಾಗಿದೆ. ಅದು ಈಗ ಹೇಗೆ ತಾನೆ ಊಟಮಾಡೀತು? ಶತ್ರುಗಳ ಪ್ರಾಣವೆಂಬ ವಾಯುವಿನಿಂದ ನನ್ನ ಕತ್ತಿಯೆಂಬ ಸರ್ಪವನ್ನು ಉಣಿಸಿ ಆ ಬಳಿಕ ನಾನು ಊಟಮಾಡುತ್ತೇನೆ.

ವಚನ॥ ಎಂದು-ಹೀಗೆಂದು ಹೇಳಿ, ಎತ್ತಿ ನಡೆಯಲ್-ಸೈನ್ಯವನ್ನೆತ್ತಿಕೊಂಡು ದಾಳಿಮಾಡಲು, ಉತ್ತವಳಿಸಿದ-ಸಂಭ್ರಮಿಸಿದ, ಸಮಯದೊಳ್-ಕಾಲದಲ್ಲಿ,

೪೫. ವಸುಷೇಣನು ಇಟ್ಟ ಹೆಜ್ಜೆಯನ್ನು ಹಿಂದಿಡಲಿಲ್ಲ.

ಅಂದು-ಆ ಸಮಯದಲ್ಲಿ, ಆಪ್ತರ್-ಬೇಕಾದವರು, ಸಚಿವರ್-ಮಂತ್ರಿಗಳು, ಚಮೂಪತಿಗಳ್-ಸೇನಾಪತಿಗಳು, ನೆರೆದು - ಸೇರಿ, ಆಳೋಚನಕ್ಕೆಂದು-ಆಲೋಚನೆ ನಡೆಸಲೆಂದು, ಬಂದಿರೆ-ಬಂದಿರಲಾಗಿ, ಅವರ, ಇಂಗಿತಮಂ-ಮನೋಭಿಪ್ರಾಯವನ್ನು, ಕಂಡು-ಕಂಡುಕೊಂಡು, ನೃಪಂ-ದೊರೆಯಾದ ವಸುಷೇಣನು, ನುಡಿದನ್ ಈರೀತಿ ನುಡಿದನು. ಇನ್ ಏವಾತೊ-ಇನ್ನು ಈ ವಿಷಯದಲ್ಲಿ ಏನೆಂದು ಮಾತಾಡುವುದು? ಕಿರ್ಚು+ಎರ್ದೊಡಂ-ಬೆಂಕಿ ಎದ್ದಿದ್ದರೂ ಅಂಗರಂ ಇದ್ದಿಲು, ಆದಂ-ವಿಶೇಷವಾಗಿ, ಗಡ-ಅಲ್ಲವೆ? ಮಾರಿ-ಮೃತ್ಯುದೇವತೆ, ಹೊಕ್ಕ ಮನೆಯೊಳ್, (ಯಲ್ಲಿ), ಪರ್ವಂ-ಹಬ್ಬ, ಗಡ-ಅಲ್ಲವೆ. ಆಳೋಚವೇಂ ಈ ಸಮಯದಲ್ಲಿ, ಆಲೋಚನೆ, ಏಂ? ಬೆರಗೇಂ-ಆಶ್ಚರ್ಯವೇನು? ಬೆಂಬಲವೇಂ-ಇನ್ನೊಬ್ಬರ ಸಹಾಯವೇನು? ಸ್ವರಾದಿಬಲವೇಂ-ಶಬ್ದದಿಂದ ಕೂಡಿದ ಬಲವೇಕೆ? ನೀಂ-ನೀನು, ಪೇೞ್ವುದೇಂ-ಹೇಳುವುದೇನು? ನಾನು ಕೇಳ್ವುದೇಂ-ಕೇಳತಕ್ಕದೇನು?

ವಸುಷೇಣನ ಆಪ್ತರು ಬಂಧುಗಳು ಮಂತ್ರಿಗಳು ಸೇನಾಪತಿಗಳು ಆ ಸಮಯದಲ್ಲಿ ಆಲೋಚನೆಗೆಂದು ಬಂದಿರಲು ಅವರ ಮನೋಭಿಪ್ರಾಯವನ್ನು ಕಂಡುಕೊಂಡ ವಸುಷೇಣನು ಈ ರೀತಿ ನುಡಿದನು. ಈ ವಿಷಯದಲ್ಲಿ ಆಡತಕ್ಕ ಮಾತೇನಿದೆ? ಕಿಚ್ಚು ಎದ್ದಿದ್ದರೂ ಮಾರಿಹೊಕ್ಕ ಮನೆಯಲ್ಲಿ ಹಬ್ಬವೇ? ಈ ವಿಷಯದಲ್ಲಿ ಆಲೋಚನೆ ಮಾಡತಕ್ಕದ್ದೇ

ನಿದೆ? ಆಶ್ಚರ್ಯವೇಕೆ? ಇತರರ ಸಹಾಯವೇಕೆ? ಸ್ವರಾದಿ ಬಲವೇಕೆ? ನೀವು ಹೇಳುವುದೇನು; ನಾನು ಕೇಳುವುದೇನು?

ವ ಚ ನ|| ಎಂದು-ಹೀಗೆಂದು ನುಡಿದು, ಮುಂದನ್(ನ್ನು), ಆರೈಯ್ಯದೆ-ವಿಚಾರಮಾಡದೆ, ಪಿಂದಂ-ಹಿಂದನ್ನು, ಪಾರದೆ-ನೋಡದೆ, ತನ್ನ ಮುಂದೆ, ನಿಂದ-ನಿಂತ, ನಿಜ-ತನ್ನ, ಸ್ಯಂದನಮನ್-ರಥವನ್ನು, ಏಱ್-ಹತ್ತಿ, ಸುಟ್ಟುರೆ-ಸುಂಟರಗಾಳಿ, ಮಸಗಿಟ್ಟುರಿಗೊಂಡನ್-ರೇಗಿ ಕೋಪಗೊಂಡನು(?) ಆ ವ್ಯತಿಕರದೊಳ್-ಸಂದರ್ಭದಲ್ಲಿ,

೪೬. ವಸುಷೇಣನ ಸೈನ್ಯ ಯುದ್ಧಕ್ಕೆ ನುಗ್ಗಿಬಂತು.

ರ ಣ ಸ ಭ ಸ + ಉತ್ಕಟಂ-ಅತಿಶಯವಾದ ಯುದ್ಧರಭಸದಿಂದ ಕೂಡಿದ, ಧರೆ-ಭೂಮಿ, ಪೆಡಂ-ಹಿಂದಕ್ಕೆ, ಮಗುಳ್ದಂತೆ ಹಿಂತಿರುಗಿದ ಹಾಗೆ, ಚತುಸ್ಸಮುದ್ರಂ-ನಾಲ್ಕು ಸಮುದ್ರಗಳು, ಉಲ್ಬಣ-ಅತಿಶಯ ವಾದ ವಿಕಟ-ವಿಕಾರವಾದ, ಉತ್ಕಟಂ-ಹೆಚ್ಚಾಗಿ, ಮಸಗಿ-ಉತ್ಸಾಹ ಗೊಂಡು, ಮೇಲ್‌ಕವಿದಂತೆ-ಮೇಲೆ ಕವಿದಹಾಗೆ, ದಿಶಾಚತುಷ್ಟಯಂ-ನಾಲ್ಕು ದಿಕ್ಕುಗಳು, ಪ್ರಣಿಹಿತಿಹೇತಿ-ಕತ್ತಿಯಿಂದ ತುಂಬಿ, ತಿಂತಿಣಿ ಸಿದಂತೆ-ಒಟ್ಟುಗೂಡಿಂದತೆ, ಪಣ್ಣಿದಾನೆ-ಸಿದ್ಧಪಡಿಸಿದ ಆನೆ, ಪಲ್ಲಣಿಸಿದ ಜೀನುಹಾಕಿದ, ವಾಜಿ-ಕುದುರೆ, ಪೂ(ಹೂ)ಡಿದ, ರಥಂ-ರಥ, ಕವಚಂ ಬಿಗಿದ-ಕವಚವನ್ನು ಬಿಗಿದಿರುತಕ್ಕ, ಆಪ್ತಸೈನಿಕಂ-ಆಪ್ತಸೈನಿಕರು, ಒಡ ವಂದದು-ಜೊತೆಯಲ್ಲಿ ಬಂದಿತು.

ಯುದ್ಧದ ರಭಸದಿಂದ ಕೂಡಿದ ಭೂಮಿ ಹಿಮ್ಮೆಟ್ಟಿತೋ, ನಾಲ್ಕು ಸಮುದ್ರಗಳು ಅತಿಶಯವಾದ ಉತ್ಸಾಹದಿಂದ ಮೇಲೆ ಕವಿದುಬಂದವೋ, ಕತ್ತಿಗಳಿಂದ ನಾಲ್ಕು ದಿಕ್ಕುಗಳು ಮುಚ್ಚಿಹೋದುವೋ ಎಂಬಂತೆ ಸಿದ್ಧವಾದ ಆನೆ, ಜೀನುಹಾಕಿದ ಕುದುರೆ, ಹೂಡಿದ ರಥ, ಕವಚವನ್ನು ಬಿಗಿದ ಆಪ್ತ ಸೈನಿಕರು ಅವನ ಜೊತೆಯಲ್ಲಿ ಬಂದರು.

ವಚನ|| ಅಂತು-ಮೇಲೆ ಹೇಳಿದ ರೀತಿಯಲ್ಲಿ, ಬಂದ-ಕವಿದು ಬಂದ, ಚತುರಂಗ-ಆನೆ ಕುದುರೆ ರಥ ಕಾಲಾಳು ಈ ನಾಲ್ಕು ಅಂಗ ಗಳಿಂದ ಕೂಡಿದ, ಪೃತನಾ-ಸೈನ್ಯದ, ಸಮೂಹ ಸಹಿತಂ-ಸಮೂಹ.

ಕೃತ-ಮಾಡಲ್ಪಟ್ಟ ಎಂದರೆ ಹೊಂದಿದ, ಭುಜಬಲದ, ಪ್ರತಾಪಂ-ಪ್ರತಾಪವುಳ್ಳವನು, ಅಪ್ರತಿಹತಾಲೇಪ-ತಡೆಯಿಲ್ಲದೆ ಮೈಗೆ ಬಳಿದು ಕೊಂಡ ಸುಗಂಧ ದ್ರವ್ಯಗಳೆಂಬ, ನದೀ-ನದಿಯಿಂದ, ಕೃತ-ಮಾಡಲ್ಪಟ್ಟ, ಅಭಿಷವಣಂ-ಅಭಿಷೇಕವುಳ್ಳವನಾದ, ವಸುಷೇಣಂ-ವಸುಷೇಣನು, ಸಾಮಂತ ಲಕ್ಷ್ಮಿಗೆ, ಶೀಮಂತನ್-ಬೈತಲೆ ಎಂದರೆ ಸಾಮಂತರಲ್ಲಿ ಶ್ರೇಷ್ಠನು, ಎನಿಪ-ಎನಿಸಿಕೊಂಡ, ಸಿಂಹಚೂಡಂಗೆ-ಸಿಂಹಚೂಡನಿಗೆ, ಬೀಡುಂದಾ(ತಾ)ಣವಾದ-ಬೀಡಾರದ ಸ್ಥಳವಾದ, ಮಾಣಿಕ್ಯಪುರಮಂ-ಮಾಣಿಕ್ಯಪುರವನ್ನು, ಐದೆವರ್ಪಾಗಳ್-ಸಮೀಪಿಸಿ ಬರುವಾಗ, ಪೊ(ಹೊ)ಡೆವ, ವೀರವ(ಪ)ಱೆಯ ವೀರವಾದ್ಯದ, ಪಿ(ಹಿ)ಡಿವ, ಬಿರುದಿನ+ಕಾಳೆಯ ಕಹಳೆಯ, ಸುತ್ತಿಱಿದ ಸುತ್ತಲೂ ಹರಡಿದ, ಮುತ್ತಿನ ತಟ್ಟೆಯ-ಛತ್ರಿಯ, ತಲೆಗೆ, ಮುಂದಲೆಯಾಗಿ ಕಾಣಿಕೆಯಾಗಿ, ಲೆಂಕರ್-ಭಟರು, ಕುಡುವ ಕೊಡುವ, ಸಿಡಿದಲೆಯ, ಸಹಗಮನ ಗಂಡನೊಡನೆ ಬೆಂಕಿಯಲ್ಲಿ ಬೀಳುವ, ಸಮುತ್ಸುಕತೆಯಂ-ಹೆಚ್ಚಾದ ಕಾತರತೆಯನ್ನು, ಕೈವಿಡಿಸೆ-ಸ್ವೀಕರಿಸಲು, ಕೈಗುಡುವ ಕೈಗೆಕೊಡುವ, ಕೈದುಬರ್ಪ-ಆಯುಧ ಬರತಕ್ಕ, ಕೈವಿಡಿದ-ಕೈಯನ್ನು ಹಿಡಿದ, ಪೆಂಡಿರ್-ಹೆಂಡಂದಿರ ತಂಡದ ನಡುವೆ ಸಮೂಹದ ಮಧ್ಯ, ಪೊತ್ತ(ಹೊ)ತ್ತ, ಪೊ(ಹೊ)ನ್ನ, ಹರಿವಾಣದೊಳಗೆ-ಹರಿವಾಣದಲ್ಲಿ ಎಂದರೆ ತಟ್ಟೆಯಲ್ಲಿ, ಜೋಳವಾಟೆಯ-ಅನ್ನದಋಣದ ಹಂಗಿನ, ನಿರ್ವಹಣದ ತೀರಿಸುವಿಕೆಯ, ನಿಬ್ಬಣಕ್ಕೆ-ಮಹೋತ್ಸವಕ್ಕೆ, ವೀರಸಿರಿ-ವೀರಶ್ರೀ ಎಂದರೆ ವೀರಲಕ್ಷ್ಮಿ, ಪೊತ್ತ-ಹೊತ್ತ, ಪೊಂಗಲಸದಂತೆ ಚಿನ್ನದ ಕಳಸದಂತೆ-ತಟತಟಿಸಿ ಹೊಳೆ ಹೊಳೆದು, ತೋರ್ಪ-ಕಾಣಿಸಿಕೊಳ್ಳುವ, ಪಂದಲೆಯಂ (ಪಸಿದು+ತಲೆ), ಹಸಿಯ ತಲೆಯನ್ನು, ಕಂಡು, ವಸುಷೇಣನು; ನಿಂದು ನೋೞ್ಪಾಗಲ್-ನೋಡುವಾಗ,

೪೭. ಮುರಿದು-ವಕ್ರವಾಗಿಯೂ ಮತ್ತು ಅಣ್ಪು+ಇಕ್ಕಿದ, ಲೇಪನವನ್ನು ಬಳಿದ, ಗಡ್ಡ ಮೀಸೆ, ಮುಡಿಯ-ಕಟ್ಟನ್ನು, ತಳೆ ಹೊಂದಿದ, ಕೆಂಬಟ್ಟೆ-ಕೆಂಪಾದ ಬಟ್ಟೆ, ಕತ್ತುರಿಯಂ-ಕಸ್ತೂರಿಯನ್ನು,

ತೂಱು(ರು)ವ, ಚುಂಚು—ಕಂದುಬಣ್ಣದ ಮೀಸೆ, ಸುಲಿಪಲ್—ಶುಭ್ರವಾದಹಲ್ಲು, ದಷ್ಟ—ಕಚ್ಚಲ್‌ಪಟ್ಟ, ಅಧರ—ಕೆಳದುಟಿ, ಭ್ರುಕುಟಿಸ್ಫುರಿತಂ—ಹೊಳೆಯುತಕ್ಕ ಹುಬ್ಬು, ಇವುಗಳಿಂದ, ಕೈವಿಗೆ—ಶೋಭಿಸಲು, ಪರಿವೇಷಗೊಂಡು—ಪರಿವೇಷವನ್ನು ಧರಿಸಿ (ಗ್ರಹಣಕಾಲದಲ್ಲಿ ಸೂರ್ಯ ಚಂದ್ರರ ಸುತ್ತಲೂ ಇರತಕ್ಕ ಗುಂಡಿಗೆ ಪರಿವೇಷವೆಂದು ಹೆಸರು) ಬೀೞ್ತಂದ-ಬಿದ್ದ, ಭಾಸ್ಕರನಂತೆ—ಸೂರ್ಯನ ಹಾಗೆ, ಪೊಂಬಟ್ಟನ-ಚಿನ್ನದ ಮುಂದಲೆಯ ಆಭರಣದಿಂದ, ಆಳ್‌ದ(ತ)ಟ್ಟಿನೊಳ್-ಶೂರರಾದ ವೀರರ ಸಮೂಹದಲ್ಲಿ ಕೂಡಿದ, ಸಿಂಹಚೂಡನ ಶಿರಂ-ತಲೆ, ಇರ್ದುದು-ಇತ್ತು.

ವಕ್ರವಾಗಿಯೂ ಮತ್ತು ಲೇಪನಗಳಿಂದಲೂ ಕೂಡಿದ ಗಡ್ಡಮೀಸೆ ಮುಡಿಕಟ್ಟಿನ ಕೆಂಪಾದ ಬಟ್ಟೆ, ಕಸ್ತೂರಿಯನ್ನು ತೂರುವ ಕಂದು ಬಣ್ಣದ ಮೀಸೆ, ಶುಭ್ರವಾದ ಹಲ್ಲು, ಕಚ್ಚಿದ ಕೆಳದುಟಿ, ಹೊಳೆಯುತ್ತಿರುವ ಹುಬ್ಬುಗಳು ಇವುಗಳು ಶೋಭಿಸಲು, ಚಿನ್ನದ ಮುಂದಲೆಯ ಆಭರಣದಿಂದ ವೀರರನಡುವಿದ್ದ ಸಿಂಹಚೂಡನತಲೆ ಭೂಭಾಗಕ್ಕೆ ಪರಿವೇಷದಿಂದ ಕೂಡಿಬಿದ್ದ ಸೂರ್ಯನಂತಿತ್ತು.

ಅಲ್ಲ, ಸಿಂಹಚೂಡನ ತಲೆ ಸಾಮಂತರನ್ನು ನೋಡಿ ನಗುವಂತಿತ್ತು.

ಸಿಂಹಚೂಡನ, ದಂತುರತ್—ಕೆದರಿದ, ಕೇಸರಂ-ಕೇಸರವುಳ್ಳ, ಶಿರೋಬ್ಜಂ-ತಲೆಯೆಂಬ ಕಮಲವು, ಪಗೆಯಂ-ಶತ್ರುವನ್ನು ಕಂಡು, ಅೞಿಯಾಸೆಗೆಯ್ದು-ವ್ಯರ್ಥವಾದ ಎಂದರೆ ಕೀಳೂ ಹಾಗೂ ಫಲ ಕೊಡದ ಆಸೆಯನ್ನು ಹೊಂದಿ, ಪೊರೆದ+ಆಳ್ದಂಗೆ-ಕಾಪಾಡಿದ ಸ್ವಾಮಿಗೆ, ಆತುರಂ-ಯುದ್ಧಸಂಬಂಧವಾದ ಸಂಕಟವು, ಮುಟ್ಟೆ-ಮುಟ್ಟಲಾಗಿ, (ಪುಟ್ಟೆ ಎಂದಿರಬಹುದೇ ?) ಮೆಯ್‌ದೆಗೆದು-ಯುದ್ಧದಲ್ಲಿ ಹಿಮ್ಮೆಟ್ಟಿ, ಆದರೆ ಆಸ್ಥಾನದೊಳ್-ರಾಜಸಭೆಯಲ್ಲಿ, ಆರ್ದು-ಶೂರನಂತೆ ಗರ್ಜಿಸಿ, ಸಂಗ್ರಾಮದೊಳ್—ಯುದ್ಧಭೂಮಿಯಲ್ಲಿ, ನೆರವಂ—ಸಹಾಯವನ್ನು, ಪಾರ್ದು-ನಿರೀಕ್ಷಿಸಿ, ಜೋಳವಾೞಿಗೆ-ಅನ್ನದ ಹಂಗಿಗೆ, ಕಯ್ಯಾಂಪ-ಕೈಯೆ

ತ್ತುವ, ಎಳ-ಚಂಚಲವಾದ, ವೇಳೆವಾಱಗೆ-ಸಮಯದ ಧರ್ಮಪಾಲ ನೆಗೆ, ಎನಸುಂ-ಎಷ್ಟಾದರೂ, ಮುಯ್ಯಾಂಪ-ಭುಜತಟ್ಟಿಕೊಳ್ಳುವ, ಸಾಮಂತರಂ-ಸಾಮಂತರಾಜರನ್ನು, ನಗುವಂತಿರ್ದುದು-ನಗುವಂತಿತ್ತು.

ಶತ್ರುವನ್ನು ಕಂಡು ಕೀಳಾದ ಆಸೆಯನ್ನು ಹೊಂದಿ, ಕಾಪಾಡಿದ ಸ್ವಾಮಿಗೆ ಸಂಕಟವೊದಗಿದಾಗ ಯುದ್ಧದಲ್ಲಿ ಹಿಮ್ಮೆಟ್ಟಿ ಆಸ್ಥಾನದಲ್ಲಿ ಶೂರನಂತೆ ಗರ್ಜಿಸಿ, ಆದರೆ ಯುದ್ಧದಲ್ಲಿ ಸಹಾಯವನ್ನು ಬಯಸಿ, ಜೋಳದ ಪಾಳಿಗಾಗಿ ಕೈಯೆತ್ತಿ ಚಂಚಲವಾದ ಸಮಯದ ಧರ್ಮಪಾಲನೆ ಮಾಡಿ ಭುಜ ತಟ್ಟಿಕೊಳ್ಳುವ ಸಾಮಂತರನ್ನು ಕೆದರಿದ ಕೇಸರದಿಂದ ಕೂಡಿದ ಸಿಂಹಚೂಡನ ಮುಖಕಮಲ ನಗುವಂತಿತ್ತು.

ವಚನ|| ಅಂತು-ಆ ರೀತಿಯಲ್ಲಿ, ಪೊ(ಹೊ)ತ್ತು, ಬಂದ, ವೀರ ಪುರುಷನಾದ ಸಿಂಹಚೂಡನ, ಶಿರೋಂಬುರುಹಮಂ-ತಲೆಯೆಂಬ ಕಮಲ ವನ್ನು, ಧಾರಿಣೀಪತಿಗೆ-ದೊರೆಯಾದ ವಸುಷೇಣನಿಗೆ, ನಿವಾಳಿಸಿ, ನಿಂದು, ವನಿತಾ-ಹೆಂಡತಿಯನ್ನು, ಹರಣ-ಚಂಡಶಾಸನನು ಕದ್ದೊಯ್ದು, ವಾರ್ತೆಯಂ-ಸಮಾಚಾರವನ್ನು, ಸೂಚಿಸಿ, ಬಱಯಂ-ಹತ್ತಿರದಲ್ಲಿದ್ದ ವನು, ಇಂತು+ಎಂದಂ-ಈ ರೀತಿ ನುಡಿದವು.

೪೯. ಶೂರರಾದ ಭಟರು ಸಿಂಹಚೂಡನನ್ನು ಕೂಡಲಿ.

ಕಾದಿದ-ಸಿಂಹಚೂಡನು ಚಂಡಶಾಸನನೊಡನೆ ನಡೆಸಿದ, ಕಾಳೆಗಂ-ಯುದ್ಧ, ಜವನ-ಯಮನ, ಜತ್ತಕುಱಕ್ಕೆ-ವೋಸಕ್ಕೆ (ಜತ್ತಕ-ವೋಸಗಾರ) ಸಮಾನಂ+ಆದುದು ಸಮನಾಯಿತು. ಏನಾದೊಡಂ ಏಂ-ಇಷ್ಟೆಲ್ಲ ಹೋರಾಡಿದರೆ ಏನಾಯಿತು? ಬದುರ್ಂಕಿ-ಬದುಕಿ ಪೋದ ಬಱಕ್ಕೆ-ಶತ್ರುವು ಬದುಕಿಹೋದಮೇಲೆ, ನಮ್ಮ ಹೇಳಿಕೆ ವೃಥ+ಅನುವಾದ-ವ್ಯರ್ಥವಾದ ಹೇಳಿಕೆ, ಎಂದರೆ ನಾವು ಮಾತನಾಡುವುದೆಲ್ಲ ವ್ಯರ್ಥವಾದಂತೆಯೇ. ಇನ್ನು ಆದಯಿತಾಜನಕ್ಕೆ-ಹೆಣ್ಣುಗಳ ವಿಷಯದಲ್ಲಿ, ತೊಱದು-ವಿರಕ್ತಿಯನ್ನು ಹೊಂದಿ, ಅಂಕರ-ಶೂರರು, ಲೆಂಕರ-ಭಟರು, ಗೊಂದಣಕ್ಕೆ-ಒಟ್ಟಾಗಿ ಹೊರಡುವುದಕ್ಕೆ, ತಳ್ವಾದಪುದು-ತಡವಾಗುತ್ತದೆ. ಉರ್ವರಾಧಿಪತಿ-ಭೂಮಿಗೆ ಒಡೆಯನಾದ ವಸುಷೇಣನೇ,

ಬೀಟ್ಕೊಡು-ಇವರನ್ನು ಕಳುಹಿಸಿಕೊಡು. ಇವರು ಸಿಂಹಚೂಡ ನೊಳ್(ನಲ್ಲಿ), ಕೂಡುಗೆ-ಕೂಡಲಿ.

ಸಿಂಹಚೂಡನು ಚಂಡಶಾಸನನೊಡನೆ ನಡೆಸಿದ ಕಾಳಗ ಯಮುನ ಮೋಸಕ್ಕೆ ಸಮನಾಯಿತು. ಇಷ್ಟೆಲ್ಲ ಹೋರಾಟ ನಡೆಸಿದುದು ವ್ಯರ್ಥ ವಾಯಿತು. ಶತ್ರುವು ಬದುಕಿಹೋದಮೇಲೆ ನಮ್ಮ ಮಾತೆಲ್ಲ ವ್ಯರ್ಥ. ಇನ್ನು ಆ ಸ್ತ್ರೀಯರ ವಿಷಯದಲ್ಲಿ ವಿರಕ್ತಿ ಹೊಂದಿ ಶೂರರಿಗೂ ಭಟ ರಿಗೂ ತಡವಾಗದಂತೆ ಅವರನ್ನು ಬೀಳ್ಕೊಡು. ಸಿಂಹಚೂಡನಲ್ಲಿ ಅವರು ಕೂಡಲಿ.

ವಚನ|| ಎಂಬುದುಂ-ಈರೀತಿಯಾಗಿ ನುಡಿಯಲು, ನಿಜ-ತನ್ನ, ಅಂತಃಕರಣ ಖೇದಕ್ಕಂ-ಮನಸ್ಸಿನ ದುಃಖಕ್ಕೂ, ವೀರಶಾಸನ ಪ್ರವಾ ದಕ್ಕಂ—ವೀರರನ್ನು ಶಿಕ್ಷಿಸಿದ ಹೇಳಿಕೆಗೂ, ಮೂದಲೆಯಂತೆ, ಇರ್ದ(ದ್ದ), ತಲೆಯಂ-ತಲೆಯನ್ನು, ನೋಡಿ, ನೀಡುಂ-ವಿಶೇಷವಾಗಿ, ಒದವಿದ ಉಂ ಟಾದ, ಅಟಲಂ-ದುಃಖವನ್ನು, ಸಮುಚಿತ+ಉಪಚಾರಂ-ಯೋಗ್ಯ ವಾದ ಉಪಚಾರ, ವಚನಕಾರುಣ ಪ್ರಸಾದ ಪ್ರದಾನ-ಕರುಣೆಯ ಮಾತಿನಿಂದ ಉಪಶಮನಮಾಡುವಿಕೆಯ, ಪ್ರಸಂಗದಿಂ-ಪ್ರಸಂಗದಿಂದ, ಸಂತರ್ಜಿಸುತ್ತುಂ-ಹೋಗಲಾಡಿಸುತ್ತ, ಇರೆ-ಇರಲಾಗಿ,

೫೦. ಆ ಸಮಯದಲ್ಲಿ ಸೂರ್ಯನು ಮುಳುಗಿದನು.

ತುಟಿಲಾಳ್-ಅತಿಶಯ ಸಾಮರ್ಥ್ಯವನ್ನು ತೋರಿಸುವುದಲ್ಲಿ(?) ಯುದ್ಧ ವೀರನೂ, (ಗದಾಯುದ್ಧ ಸಂಗ್ರಹ ೫-೪೮ ಟಿಪ್ಪಣಿಯನ್ನು ನೋಡಿ), ಮತ್-ನನ್ನ, ಗೋತ್ರ-ವಂಶದಲ್ಲಿ, ಭವಂ-ಹುಟ್ಟಿದವನು, ಕಲಿ-ಶೂರನೂ ಆದ, ಸಿಂಹಚೂಡನ್ ಸ್ವಾಮಿಭಕ್ತನಾದ ಸಿಂಹ ಚೂಡನು, ಕಟಿದಂ-ತೀರಿಹೋದನು, ಎಂದು-ಈರೀತಿ ಮನಸ್ಸಿನಲ್ಲಿ ಯೋಚಿಸಿಕೊಂಡು, ಅವಯವದ-ಅತಿಶಯವಾದ, ಒಂದು, ಅಟಲಿಂದೆ ದುಃಖದಿಂದ, ಕೆಂಪು ಬಣ್ಣವು, ಮಿಗೆ-ಹೆಚ್ಚಾಗಲು (ಸಾಯಂಕಾಲ ದಲ್ಲಿ ಸೂರ್ಯನು ಅತಿಶಯವಾದ, ಕಣ್ಣಿಗೆ ಹಿತವಾದ ಕೆಂಪು ಬಣ್ಣದಿಂದ

ಕೂಡಿರುತ್ತಾನೆ. ದುಃಖದಿಂದ ಅತ್ತು ಅತ್ತು ಅವನ ಮುಖ ಕಣ್ಣುಗಳು ಕೆಂಪಾಗಿವೆಯೆಂದು ಕವಿ ಇಲ್ಲಿ ಉತ್ಪ್ರೇಕ್ಷೆ ಮಾಡಿದ್ದಾನೆ) ನೀರ್ ಇೞಿವಂತಿರೆ-ನೀರಿನಲ್ಲಿ ಮುಳುಗುವ ಹಾಗೆ, ಸೂರ್ಯನ್(ನು), ಅಪರ-ಪಶ್ಚಿಮದ, ಜಲಧಿಗೆ-ಸಮುದ್ರಕ್ಕೆ, ಇೞಿದಂ-ಇಳಿದನು, ಎಂದರೆ ಮುಳುಗಿದನು ಎಂದು ಅರ್ಥ.

ಯುದ್ಧವೀರನೂ, ನನ್ನ ವಂಶದಲ್ಲಿ ಹುಟ್ಟಿದವನೂ ಶೂರನು ಆದ ಸಿಂಹಚೂಡನೆಂಬುವನು ತೀರಿಹೋದನು ಎಂಬ ಒಂದು ಅತಿಶಯವಾದ ದುಃಖದಿಂದ ಸೂರ್ಯನ ಕೆಂಪು ಹೆಚ್ಚಾಗಲು ನೀರಿನಲ್ಲಿ ಮುಳುಗುವಂತೆ ಸೂರ್ಯನು ಪಶ್ಚಿಮ ಸಮುದ್ರದಲ್ಲಿ ಮುಳುಗಿದನು.

ವಚನ || ಆ ಸಂರಂಭದೊಳ್-ಆ ಸಡಗರದ ಸಮಯದಲ್ಲಿ,

೫೧. ಪಟ್ಟಣಿಗರು ಚಂಡಶಾಸನನ ಕಾರ್ಯಕ್ಕಾಗಿ ತಮ್ಮ ಅನುತಾಪವನ್ನು ವ್ಯಕ್ತಪಡಿಸಿದರು.

ಅರಸನ್-ದೊರೆಯಾದ ಚಂಡಶಾಸನನು, ಪರವೆ(ಪೆ)ಣ್ಣಂ–ಪರಸ್ತ್ರೀಯನ್ನು, ತಂದನೋ, ಇಲ್ಲವೆ ಪೆಸರ್+ಕಿಡೆ-ತನ್ನ ಉತ್ತಮವಾದ ಹೆಸರು ಹಾಳಾಗುವಂತೆ, ಪೆರ್+ಮಾರಿಯಂ-ಹೆಮ್ಮಾರಿಯನ್ನು, ದುರ್ಗಕ್ಕೆ-ಈ ನಮ್ಮ ಕೋಟೆಗೆ, ತಂದನೋ, ಸೇನಾಸಮಗ್ರಂ-ಸೇನೆಯಿಂದ ಕೂಡಿದ, ನಿಜಗ(ಕ)ಲಿ-ಸ್ವಭಾವ ಶೂರನೂ, ವಧು ತನ್ನ ಹೆಂಡತಿಯಾದ ಸುನಂದೆಯ ಅಗಲಿಕೆಯಿಂದ, ವಿಹ್ವಲಂ-ಕಳವಳಗೊಂಡ ಮನಸ್ಸುಳ್ಳವನೂ ಆದ, ವಸುಷೇಣಂ ವಸುಷೇಣನು, ದಳ್ಳುರಿ ಕಾಡು ಕಿಚ್ಚು, ದಾೞಿಟ್ಟಂತೆ-ದಾಳಿಮಾಡಿದ ಹಾಗೆ, ಇದಂ-ಈ ದುರ್ಗವನ್ನು ಸುಟ್ಟು, ಉರಿಪದೆ-ಬೂದಿಮಾಡದೆ, ಇರಿಸನ್-ಇರಿಸುವುದಿಲ್ಲ, ಏಗೈವೆವು-ಈ ಸಂದರ್ಭದಲ್ಲಿ ಏನನ್ನು ಮಾಡೋಣ, ಎಂತು+ಇರ್ಪೆವು-ಈ ಕಷ್ಟವನ್ನು ಸಹಿಸಿಕೊಂಡು ಹೇಗೆತಾನೆ ಇರುತ್ತೇವೆ, ಎತ್ತಲ್-ಯಾವ ಕಡೆಗೆ, ಪರಿವೆಂ-ಹರಿಯುತ್ತೇವೆ ಎಂದರೆ ಓಡಿಹೋಗೋಣ, ಚದುರೋಣ. ನಾವ್(ವು) ಎಂದು ಪೌರರ್-ಪಟ್ಟಣಿಗರು, ಕುಸಿದರ್-ತಮ್ಮಲ್ಲಿಯೇ ಸಂಕಟಪಟ್ಟರು, ಅದಿರ್ದರ್ ಹೆದರಿಹೋದರು. ಅಳ್ಳಾಡಿ, ತಳ್ಳಂಕಗೊಂಡರ್-ಭೀತಿಯಿಂದ ತಲ್ಲಣಗೊಂಡರು.

ಆ ಸಮಯದಲ್ಲಿ ಪಟ್ಟಣಿಗರು, "ನಮ್ಮ ದೊರೆ ಈ ದುರ್ಗಕ್ಕೆ ಪರಸ್ತ್ರೀಯನ್ನು ತಂದನೇನು? ಇಲ್ಲ, ತನ್ನ ಹೆಸರು ಕೆಟ್ಟುಹೋಗು ವಂತೆ ಹೆಮ್ಮಾರಿಯೊಂದನ್ನು ತಂದನು. ಸೇನಾಸಮಗ್ರನೂ ಹೆಂಡತಿಯ ಅಗಲಿಕೆಯಿಂದ ಚಂಚಲಗೊಂಡ ಮನಸ್ಸುಳ್ಳವನೂ ಸ್ವಭಾವ ಶೂರನೂ ಆದ ವಸುಷೇಣನು ಕಾಡುಕಿಚ್ಚು ದಾಳಿಯಿಟ್ಟಂತೆ ಇದನ್ನು ಸುಟ್ಟು ಉರಿಸದೇ ಇರನು. ಈಗ ಏನುಮಾಡೋಣ? ಈ ದುಃಖವನ್ನು ಸಹಿಸಿಕೊಂಡು ಇಲ್ಲಿ ಹೇಗೆತಾನೆ ಇರೋಣ? ನಾವುಎತ್ತ ಕಡೆ ಚದು ರೋಣ" ಎಂದು ಸಂಕಟಪಟ್ಟುಕೊಂಡು ಹೆದರಿ ಅಲ್ಲಾಡಿ ಭೀತಿಯಿಂದ ತಲ್ಲಣಗೊಂಡರು.

ಆಗಳ್-ಆಗ,

೫೨. ವಸುಷೇಣನು ಲಗ್ಗೆ ಮಾಡಿದನು

ಇಳಾತಳಂ-ಭೂಭಾಗ, ಮುರಿದು-ವಕ್ರವಾಗಿ, ನೋಣೆಯಲ್-ಕಬಳಿ ಸಲು, ನುಂಗಲ್(ಲು), ಮೂರಿಟ್ಟಂತೆ–ಬಾಯಿಬಿಟ್ಟಂತೆ, ದುರ್ಗಕ್ಕೆ–ಕೋಟೆಗೆ, ನಿಚ್ಚಣಿ(ನಿಃಶ್ರೇಣಿ. ಸಂ.)-ಏಣಿ, ಸಾರ್ಚುಂದೊಲೆ-ಏರಿಸಿಟ್ಟ ತೊಲೆ, ವೀರಸೇತು-ವೀರರು ನಡೆದು ಹೋಗುವ ಸೇತುವೆ(?), ನಡೆ ಸಾರಂ-ಸಣ್ಣಕೋಟೆ, ಬದ್ದರಂ-ಕಟ್ಟುವಿಕೆ, ಗೆಗ್ಗ–ಕೋಟೆಯ ಒಳಭಾಗ, ಡೆಂಕಣಿ–ಧ್ವಜದಂಡ, ಗುಮ್ಮಂ–ಭೂತಗಳಗೊಂಬೆ, ಪಡಿಗೋಂಟೆ-ಪ್ರತಿ ಕೋಟೆ, ಎಂಬ, ಬಹುಕೋಟಾ ಯಂತ್ರಸಾಮಗ್ರಿ(ಗಳು), ತಿಂತಿಥಿ ಗೊಂಡು-ಒಟ್ಟಾಗಿ ಸೇರಿ, ಅಂತಿರೆ-ಎದುರಿಸಿರಲು, ಲಗ್ಗೆಗಾಗಿ, ಆರ್ದು-ಗರ್ಜಿಸಿ, ವಸುಷೇಣಂ(ನು), ಸಾರ್ದುಂ–ಚಂಡಶಾಸನನಿದ್ದ ಕೋಟೆ ಯನ್ನು ಸೇರಿ, ಸೂಟ್ಕೈಸಿದಂ-ಶಬ್ದಮಾಡಿಸಿದನು.

ಭೂಭಾಗವೇ ಲೋಕವನ್ನು ನುಂಗಲು ಬಾಯಿ ಬಿಟ್ಟಂತೆ, ಏಣಿ, ಏರಿಸಿಟ್ಟ ತೊಲೆ, ವೀರಸೇತು, ನಡೆಸಾರ, ಬದ್ದರ, ಗೆಗ್ಗೆ, ಧ್ವಜದಂಡ, ಗೊಂಬೆ, ಪ್ರತಿಕೋಟೆ ಇವೇ ಮೊದಲಾದ ಯಂತ್ರಸಾಮಗ್ರಿಗಳನ್ನು ಸಂಗ್ರಹಿಸಿ ವಸುಷೇಣನು ಲಗ್ಗೆಮಾಡಲು ವಾದ್ಯಗಳನ್ನು ಬಾರಿಸಿದನು,

ವಚನ|| ಅಂತು ಆ ರೀತಿಯಲ್ಲಿ ಸೂಟ್ಕೈಸುವ–ಮೊಳಗುವ ನಿಸ್ಸಾಳ-ವಾದ್ಯ, ಭೇರೀ, ಢಕ್ಕಾ, ಮೃದಂಗ, ಇವುಗಳ ಕೋಳಾಹಳಂ–

ಕೋಳಾಹಳವು, ಎತ್ತಿ, ಪೊ(ಹೊ)ತ್ತು, ತಂದು, ಇೞಿಪಿದ-ಇಳುಹಿಸಿದ, ಗುಡ-ಬಿಲ್ಲವನ್ನು, ವಿಡಂಬಿತ-ಮುಸುರಿದ, ಪಿಪೀಲಿಕಾಜಾಲದಂತೆ ಇರುವೆಗಳ ಸಮೂಹದಂತೆ, ಮುತ್ತಿ ಮುಸುಱಿ(ರಿ), ಮತ್ತೆ, ಕಟ್ಟಾಯದ-ಪರಾಕ್ರಮದ, ಕಡುಗಲಿಗಳೆಲ್ಲಂ-ಶೂರರೆಲ್ಲರೂ, ಅಣ್ಮಣ್ಮೆನಿಂದು-ಪರಾಕ್ರಮವನ್ನೇ ಮೆರದು ನಿಂತು, ಮುಮ್ಮೞಿಯಾಗೆ-ರೂಪನಾಶವಾಗೆ, ಪೋ(ಹೋ)ಯ್ತು, ಪೋಯ್ತು. ದುರ್ಗಂ-ಕೋಟೆ, ಇನ್ ಏನ್ ಎಂದು, ಒಳಗೆಲ್ಲಂ-ಕೋಟೆಯೊಳಗೆ, ಸರಕುಗಟ್ಟಿ, ಪೊಱಗೆಲ್ಲಂ-ಹೊರಗಡೆ, ಎಯ್ದೆ-ಚೆನ್ನಾಗಿ, ಗುಡಿಗಟ್ಟಿ-ಬಾವುಟವನ್ನು ನಿಲ್ಲಿಸಿ, ಸೀರೆಯಂ-ಬಟ್ಟೆಯನ್ನು ಬೀಸಿ, ಬೊಬ್ಬಿಱಿದು-ಬೊಬ್ಬೆಹಾಕಿ, ಆರೆ-ಗರ್ಜಿಸಲು, ತೊಟ್ಟನೆ ಕಂಡು-ಅದನ್ನು ತಕ್ಷಣವೇ ಕಂಡು,

೫೩. ಚಂಡಶಾಸನನು ಶತ್ರುಸೈನ್ಯವನ್ನು ಆಕ್ರಮಿಸಿದನು.

ರಣಮಂಡಳದೊಳ್-ಯುದ್ಧಭೂಮಿಯಲ್ಲಿ, ಪೆಱತೆಗೆದ-ಹಿಮ್ಮೆಟ್ಟಿದ, ಅಣಿಯಂ-ಸೈನ್ಯವು, ತೆಗೆನೆಱೆದ-ಬಾಣವನ್ನು ಇಟ್ಟುಸಿದ್ಧವಾದ, ಬಿಲ್ಲವೊಲಿರ್ದ-ಬಿಲ್ಲಿನಂತಿದ್ದ, ಭಟಾಗ್ರಣಿ-ಭಟರಲ್ಲಿ ಶ್ರೇಷ್ಠನಾದ ಚಂಡಶಾಸನನು, ಪ(ಹ)ರಿದು, ದಂಡೆಗೊಂಡು-ದಂಡೆಯೆಂಬ ಆಸನವನ್ನು ಹಾಕಿ, ಅಡ್ಡಣದಿಂದಂ-ಗುರಾಣಿಯಿಂದ, ಚಂಡಶಾಸನನು, ಕೈಕೊಂಡಂ-ಆಕ್ರಮಿಸಿದನು.

ಯುದ್ಧದಲ್ಲಿ ಸೈನ್ಯವು ಹಿಮ್ಮೆಟ್ಟಿದುದನ್ನು ಕಂಡು ಚಂಡಶಾಸನನು ದಂಡೆಯೆಂಬ ಆಸನವನ್ನು ಹಾಕಿ ಗುರಾಣಿಯನ್ನು ಅಡ್ಡಯಿಸಿ ಶತ್ರುಸೈನ್ಯವನ್ನು ಆಕ್ರಮಿಸಿದನು.

೫೪. ವಸುಷೇಣನ ಆಪ್ತರು ಅವನನ್ನು ತಡೆದರು.

ಅದನ್-ಚಂಡಶಾಸನನ ಈ ವರ್ತನೆಯನ್ನು, ಆಗಳ್-ಆಸಮಯದಲ್ಲಿ, ಕಂಡು, ಕಣ್ಣಿಂದ, ಉರಿ, ಬರೆ-ಬರಲಾಗಿ, ಪುರ್ವಿಂದಂ-ಹುಬ್ಬಿನಿಂದ, ಹೊಗೆ-ಹೊಗೆ, ಉರ್ವೇೞೆ-ಅಧಿಕವಾಗಲು, ಮದಮಾತಂಗಾರಿ ಕೊಬ್ಬಿದ ಆನೆಗೆ ಶತ್ರುವಾದ ಸಿಂಹದಂತಿರುವ ವಸುಷೇಣನು, ಪೂರ್ವಾಸನದಿಂ-ತಾನುಮೊದಲು ಕುಳಿತಿದ್ದ ಪೀಠದಿಂದ, ಇೞಿದು, ಮೈಪತ್ತಿದ-ಮೈಗೆ ಅಂಟಿಕೊಂಡ, ವಜ್ರಾಂಗಿ-ಕವಚ, ಕೈಯೆತ್ತಿದ-

ಕೈಯಲ್ಲಿ ಎತ್ತಿರತಕ್ಕ, ಕೊಂತಂ-ಆಯುಧ, ದಂಡೆಗೊಂಡ–ದಂಡೆಯೆಂಬ ಆಸನದಲ್ಲಿದ್ದ, ಅಡ್ಡಣಂ-ಗುರಾಣಿ, ಇರೆ-ಇರಲು, ವಸುಷೇಣಂ–ವಸುಷೇಣನು, ಭರಂಗೈಯ್ಯುದುಂ-ಪರಾಕ್ರಮವನ್ನು ಪ್ರಕಟಿಸಲು, ಪೋದುದು ಪೊತ್ತು ಹೊತ್ತು ಮುಳುಗಿತು, ಇನ್ ಇನ್ನುಮುಂದೆ, ಆಳ್ಕಾದದೆ–ಸೈನಿಕರು ಯುದ್ಧಮಾಡದೆ, ಕದಡಿದುದು–ಚದುರಿತು, ಎಂದು ಆಪ್ತರ್-ವಸುಷೇಣನ ಆಪ್ತರು, ಅಡ್ಡಯಿಸಿ ತಗೆದು, ನಿಂದರ್-ನಿಂತುಕೊಂಡರು-

ಚಂಡಶಾಸನನು ಆಕ್ರಮಿಸಿದುದನ್ನು ಕಂಡು ವಸುಷೇಣನ ಕಣ್ಣಿನಿಂದ ಉರಿ, ಹುಬ್ಬಿನಿಂದ ಹೊಗೆ ಕಾಣಿಸಿಕೊಳ್ಳಲು ಮದ್ದಾನೆಯ ವೈರಿಯಾದ ಸಿಂಹದಂತಿದ್ದ, ವಸುಷೇಣನು ತನ್ನ ಆಸನದಿಂದ ಇಳಿದು ಕವಚವನ್ನು ಧರಿಸಿ, ಕೈಯಲ್ಲಿ ಕೊಂತವನ್ನು ಹಿಡಿದು, ದಂಡೆಯೆಂಬ ಆಸನದಲ್ಲಿ ಗುರಾಣಿಯನ್ನು ಧರಿಸಿ, ಪರಾಕ್ರಮವನ್ನು ಮೆರೆಯಲು ಆಗ ಅವನ ಆಪ್ತರು ಅವನನ್ನು ಕಂಡು ಹೊತ್ತು ಮುಳುಗಿತು ಭಟರು ಯುದ್ಧ ಮಾಡದೆ ಆ ಕಡೆ ಚದುರಿದರು ಎಂದು ಅವನನ್ನು ಅಡ್ಡಯಿಸಿದರು.

ವಚನ|| ಆಗಳ್-ಆಗ, ಎರಡುಂ-ಎರಡೂ, ಪಡೆಗಳ್–ಸೈನ್ಯಗಳು, ಅಪಹಾರತೂರ್ಯಂ–ಯುದ್ಧವನ್ನು ನಿಲ್ಲಿಸುವ ವಾದ್ಯವನ್ನು, ಮೊಟಿಗೆ, ಬಾರಿಸಲು, ಪೆಱತೆಗೆಯಲೊಡಂ-ಹಿಮ್ಮೆಟ್ಟಲಾಗಿ, ವಸುಷೇಣಂ ವಸುಷೇಣನು, ನಿಜನಿವೇಶಿತಸ್ಕಂಧಾವಾರಮುಂ ತಾನು ಬೀಡು ಬಿಟ್ಟಿದ್ದ ಬೀಡಾರವನ್ನು, ಪೊಕ್ಕನ್–ಪೊಕ್ಕನು. ಇತ್ತ–ಈಕಡೆ, ಚಂಡಶಾಸನಂ–ಚಂಡಶಾಸನನು, ಮಂಡಳಿಸಿ ಗುಂಪಾಗಿ, ಪಿಡಿದ–ಹಿಡಿದಿದ್ದ, ಕೈದೀವಿಗೆಯ-ಕೈಯಲ್ಲಿ ಹಿಡಿದ ದೀಪದ, ಬೆಳಗಿನೊಳ್–ಕಾಂತಿಯಲ್ಲಿ, ತೊಟ್ಟ, ಗದ್ದುಗೆಯ- ಪೀಠವ, ಗರುಡವಕ್ಕದ-ಗರುಡಪಕ್ಷದ(ರೆಕ್ಕೆ), ಕವಚದ, ನವರತ್ನ ಕಿರಣಂಗಳ, ಕಿಟ್ಟ-ಕಿತ್ತ, ಕರವಾಳ-ಕತ್ತಿಯ, ಬಾಯದಾರೆಯೊಳ್-ಅಲಗಿನಲ್ಲಿ, ಬಳ್ಳಿಗೊಂಡು-ಬಳ್ಳಿಯ ಆಕಾರವಾಗಿ, ಮಿಳ್ಳಿಸಿ-ಚಲಿಸಿ, ಪೊಳೆಯೆ–ಹೊಳೆಯಲು, ಕಟ್ಟಿದ, ಕಠಾರದ-ಕಠಾರಿಯ, ಬದ್ದಿಗೆಯ–ಕಟ್ಟಿದ ಪಟ್ಟಿಯ, ತೊಂಗಲ್ದೆಗೆದು ಗೊಂಚಲನ್ನು ತೆಗೆದು, ಬಿಗಿದು, ಎಟಲ್ವ-ಜೋತಾಡುವ, ಬಾಲ(ಳ)ಗಚ್ಚೆಯ, ವಿಳಸದ–ವಿಲಾಸದ, ಸೆಱಗಂ ಸೆರಗನ್ನು, ಸೆಳೆದು, ಅಳ್ಳಿಱಿಯೆಯುಂ-ಭೇದಿಸಲು, ಒಂದ್

ಕೈಯೊಳ್(ಯಲ್ಲಿ), ಇಕ್ಕಿದ-ಹಾಕಿಕೊಂಡ, ಎರಡು ಕಂಕಣದ-ಕಡಗದ, ಝಣಝಣತ್ಕಾರಂ-ಶಬ್ದವು, ಜಡಿವ-ಬೀಸುವ, ಬಾಳ-ಕತ್ತಿಯ, ಕುಣಿವ ಕೊಂಕಿಂಗೆ, ಕಿಂಕಿಣೀರವಮುನ್-ಕಿರುಗಂಟೆಗಳ ಶಬ್ದವನ್ನು, ಅಳುಂಕೆ ಗೊಳಿಸಿಯುಂ ಹೆಚ್ಚಿಸಿಯೂ, ಓದುವ, ರಾಯವಾಡದ-ರಾಜರ ಸಮೂಹದ, ಉಗ್ಗಡಿಸುವ ಹೊಗಳುವ, ಮಾಂಗಳಿಕದ (?) ಚಪ್ಪರಿಸುವ, ಪಡಿಯಱರ-ಪ್ರತೀಹಾರಿಗಳ, ನೆಲನಂ ಉಗ್ಗಡಿಸುವ, ಪಡೆವಳರ ಸೇನಾಪತಿಗಳ, ತನ್ನ ಬೀರಮುಂ-ಪರಾಕ್ರಮುವನ್ನು, ಮನ್ನಿಸಿ-ಮನ್ನಣೆಮಾಡಿ, ಪೊಗಟ್ದ-ಹೊಗಳಿದ, ಕೈವಾರಿಗಳ-ಹೊಗಳುಭಟ್ಟರ, ಆಡಂಬರಂ, ಅಳುಂಬವಾಗೆ ಅತಿಶಯವಾಗಲು, ಸುನಂದೆಯುಂ-ಸುನಂದೆಯನ್ನು, ತಂದು, ಸೆಱ(ರೆ)ಯಿಟ್ಟು, ಮಣಿಮಾಡಕ್ಕೆ ಉಪ್ಪರಿಗೆಯ ಮನೆಗೆ, ಬಂದು,

೫೫. ಚಂಡಶಾಸನನು ಸುನಂದೆಯನ್ನು ಸಮೀಪಿಸಿದನು.

ತತ್-ಆ, ಉರ್ವೀಶ್ವರಂ-ದೊರೆಯಾದ ಚಂಡಶಾಸನನು, ಘನ-ಹೆಚ್ಚಾದ, ನಿಶ್ವಾಸ-ನಿಟ್ಟುಸಿರಿನಿಂದ, ತರಂಗಿತ-ಚದುರಿ ಅಲೆಯಲೆಯಾದ, ಅಳಕಿಯನ್-ಕೂದಲುಳ್ಳ, ಅಗ್ರಪ್ರಾಂತ-ತುದಿಯ ಪ್ರದೇಶದ, ವಾರ್‌ಬಿಂದು-ನೀರಿನ ಹನಿಗಳುಳ್ಳ, ಪಕ್ಷ್ಮಾವಳಿಯುಂ-ಕಣ್ಣಿನ ರೆಪ್ಪೆಯುಳ್ಳವಳನ್ನು, ವಿಯೋಗ-ಅಗಲಿಕೆಯ, ದಹನ-ಬೆಂಕಿಯಿಂದ, ಪ್ಲುಷ್ಟ-ಕಂದಿದ, ಅಧರ-ಕೆಳದುಟಿಯ, ಛಾಯೆಯುಂ-ಕಾಂತಿಯುಳ್ಳ, ವಿನತ-ಕಳೆಗುಂದಿದ, ಪ್ರಾಹ್ಣ-ಬೆಳಗಿನ ಕಾಲದ, ಸುಧಾಂಶುಬಿಂಬ-ಚಂದ್ರಬಿಂಬದಂತಿರುವ, ಮುಖಿಯುಂ- ಮುಖವುಳ್ಳವಳನ್ನು, ಚೀನೋತ್ತರೀಯ-ರೇಷ್ಮೆಯ ಬಟ್ಟೆಯಿಂದ, ಅವಗುಂಠನ-ತೆರೆಯ, ನಿರ್ಭಿನ್ನ-ಅಂಟಿಕೊಂಡ, ಕಪೋಲ-ಕೆನ್ನೆಯ, ಪಾಂಡುರುಚಿಯುಂ-ಬಿಳುಪಾದ ಕಾಂತಿಯುಳ್ಳ ಸುನಂದೆಯನ್ನು, ಸಾರ್ದಂ-ಸಮೀಪಿಸಿದನು.

ನಿಟ್ಟುಸಿರಿನಿಂದ ಚದುರಿ ಅಲೆಯಲೆಯಾದ ಮುಂಗುರುಳನ್ನುಳ್ಳ, ಕಣ್ಣೀರಿನಿಂದ ಕೂಡಿದ ರೆಪ್ಪೆಯುಳ್ಳ, ವಿಯೋಗದ ಉರಿಯಿಂದ ಬೆಂದ ಕೆಳದುಟಿಯ ಕಾಂತಿಯುಳ್ಳ, ಸೂರ್ಯೋದಯದ ಕಾಲದಲ್ಲಿರುವ ಚಂದ್ರಬಿಂಬದ ಮುಖವುಳ್ಳ, ರೇಷ್ಮೆಯ ತೆರೆಯಿಂದ ಕೂಡಿ ಕಪೋಲದ

ಬಿಳುಪಾದ ಕಾಂತಿಯುಳ್ಳ ಸುನಂದೆಯನ್ನು ಚಂಡಶಾಸನನು ಸಮೀಪಿಸಿದನು.

೫೬. ಸೆರೆಸಿಕ್ಕ ಸುನಂದಾದೇವಿಯ ವರ್ಣನೆ ಇಲ್ಲಿದೆ.

ಬಿದಿ ಎಂಬ-ವಿಧಿ(ಸಂ)ಯೆಂಬ, ಮದಗಜಂ-ಮದ್ದಾನೆ, ನೃಪ-ರಾಜನ, ಸದನ-ಮನೆಯೆಂಬ, ಸರೋವರದೊಳ್(ದಲ್ಲಿ), ಎಟಿ(ಳಿ)ದು, ಸೆಳೆದು-ಸೆಳೆದುಕೊಂಡು ಬಂದು, ವನ+ಅಂತರದೊಳ್-ಕಾಡನಡುವೆ, ಇಕ್ಕಿದ-ಇಟ್ಟ, ಬಾಳ ಮೃಣಳದವೋಲ್-ತಾವರೆಯದಂಟಿನಂತೆ, ಸತಿ-ಆ ಸುನಂದೆ, ಕೊರಗಿ, ಆ ಕೊರಗಿನಲ್ಲಿಯೂ ಕೂಡ, ಕಣ್ಗೆ-ಕಣ್ಣುಗಳಿಗೆ (ಅವಳನ್ನು ನೋಡುವ ಕಣ್ಣುಗಳಿಗೆ), ಕರಂ-ಅತಿಶಯವಾಗಿ, ಎಸೆದಿರ್ದಳ್-ಶೋಭಿಸಿದ್ದಳು.

ವಿಧಿಯೆಂಬ ಮದ್ದಾನೆಯು ರಾಜನ ಮನೆಯೆಂಬ ಸರೋವರದಲ್ಲಿ ಎಳೆದು ಸೆಳೆದು ತಂದು ಕಾಡನಡುವೆ ಇಟ್ಟ ಎಳೆಯ ತಾವರೆಯ ದಂಟಿನಂತೆ ಆ ಸುನಂದೆ ಕೊರಗಿನಿಂದಿದ್ದರೂ ನೋಡುವವರ ಕಣ್ಣಿಗೆ ತುಂಬಾ ಚೆಲುವೆಯಾಗಿ ಕಂಡುಬಂದಳು.

ವಚನ || ಅಂತು-ಮೇಲೆ ಹೇಳಿದ ರೀತಿಯಲ್ಲಿ, ಸಾರ್ದು-ಅವಳನ್ನು ಸೇರಿ, ತನ್ನ, ಒಡನೆ ಬಂದು, ಬಾಗಿಲೊಳ್(ಅಲ್ಲಿ), ನಿಂದ-ನಿಂತಿದ್ದ, ಪರಿಜನಮುಂ-ಪರಿವಾರದವರನ್ನು ಕೆಲಬಲದೋಳ್-ಅಕ್ಕಪಕ್ಕದಲ್ಲಿ, ಇರ್ದ-ಇದ್ದ, ಪಸಾಯಿತರುಮಂ-ಮೆಚ್ಚಿನವರನನ್ನು, ಪರಿಹರಿಸಿ-ಕಳುಹಿಸಿ, ಕೃತಕ-ನಟನೆಯ, ವಿನಯೋಪಚಾರಂ-ವಿನಯದಿಂದ ಕೂಡಿದ ಉಪಚಾರವು,ಎಸೆಯೆ-ಶೋಭಿಸಲು, ಚಂಡಶಾಸನಂ-ಚಂಡಶಾಸನನು, ಸುನಂದಾದೇವಿಗೆ, ಇಂತು+ಎಂದಂ-ಈ ರೀತಿ ಹೇಳಿದನು.

೫೭. ಚಂಡಶಾಸನನು ಸುನಂದಾದೇವಿಯ ಪ್ರಣಯ ಭಿಕ್ಷೆಯನ್ನು ಬೇಡುತ್ತಾನೆ,

ನಯದಿಂ ಲೋಕರೀತಿಯಂತೆ, ನಿನ್ನ ಒಡಂಬಡಂ-ಒಪ್ಪಿಗೆಯನ್ನು ಪಡೆಯದೆ, ಇಂದು-ಈಗ, ಔತ್ಸುಕ್ಯದಿಂ-ನಿನ್ನಲ್ಲಿ ನನಗಿರುವ ಅತಿಶಯವಾದ ಆಸೆಯಿಂದ, ತಂದ ನಿನ್ನನ್ನು ಇಲ್ಲಿಗೆ ಕರೆದುತಂದ,ಸಲ್ಗೆಯಂ-ನಿನ್ನ ವಿಷಯದಲ್ಲಿ ನಾನು ತೆಗೆದುಕೊಂಡ ಸಲಿಗೆಯನ್ನು ಮನ್ನಿಸು. ನಾನು

ನಿನ್ನ ವಿಷಯದಲ್ಲಿ ಸಲಿಗೆಯನ್ನು ತೆಗೆದುಕೊಳ್ಳಲು ಕಾರಣವೇನೆಂದರೆ ಕಾಮಿ-ಕಾಮಿಯಾದವನು, ಕಣ್-ಇತರರ ಕಣ್ಣು ತನ್ನ ವಿಷಯದಲ್ಲಿ ಯಾವ ರೀತಿ ಇದೆ ಎಂದರೆ ಇತರರು ತಾನು ಮಾಡುತ್ತಿರುವ ಕೆಲಸ ವನ್ನು ನೋಡುವರೇ ಇಲ್ಲವೇ ಎಂಬುದನ್ನು, ಅಱಿವನ್-ತಿಳಿಯುವವನು, ಅಲ್ತು-ಅಲ್ಲ(ಕಾಮಿಯು ಹೆಣ್ಣಿನ ಕಣ್ಣನ್ನು ತಿಳಿಯುವವನಾಗಿಲ್ಲ ಎಂದು ಇದಕ್ಕೆ ಅರ್ಥವಾಗಬಹುದು)ಆಂ-ನಾನು, ನಿನಗೆ ಗಂಡುತೊಟ್ತು-ಸೇವಕ. ಎನ್ನ ರಾಣಿಯವಾಸಂ-ರಾಣಿವಾಸದವರೂ, ನಿನಗೆ, ಪರಿಚಾರಕಾದಿ-ಸೇವ ಕರಂತೆ ಇದ್ದಾರೆ. ಆದ್ದರಿಂದ ಈ ಸಾಮ್ರಾಜ್ಯ ಲಕ್ಷ್ಮಿಯ ಸುಖದ ಉದ ಯದೋಳ್-ಏಳಿಗೆಯಲ್ಲಿ, ನೀನ್(ನು), ನನಗೆ, ದಲತ್-ಅರಳಿದ, ಅಬ್ಜ-ಕಮಲದಂತೆ ಮನೋಹರವಾಗಿ, ಲೋಲ-ಚಂಚಲವಾಗಿರುವ, ಈಕ್ಷಣೆ-ಕಣ್ಣುಳ್ಳ ಸುನಂದೆಯೆ,ವಲ್ಲಭೆಯಾಗಿ-ಹೆಂಡತಿಯಾಗಿ, ಇರು.

ಲೋಕದ ನಡತೆಯಂತೆ ನಿನ್ನ ಒಪ್ಪಿಗೆಯನ್ನು ಪಡೆಯದೆ ನಿನ್ನಲ್ಲಿ ನನಗಿರುವ ಆಸೆಯಿಂದ ನಿನ್ನನ್ನು ಇಲ್ಲಿಗೆ ತಂದೆ. ನಿನ್ನ ವಿಷಯದಲ್ಲಿ ನಾನು ತೆಗೆದುಕೊಂಡ ಈ ಸಲಿಗೆಯನ್ನು ಕ್ಷಮಿಸು. ಈ ಲೋಕೋಕ್ತಿ ಯನ್ನು ಕೇಳಿಲ್ಲವೇ ನೀನು? ಕಾಮಿ ಕಣ್ಣನ್ನು ಅರಿಯನು. ಈಗ ನಾನು ನಿನ್ನ ಗಂಡುತೊತ್ತು. ನನ್ನ ರಾಣಿಯವಾಸ ನಿನಗೆ ಪರಿಚಾರಕರು. ಸಾಮ್ರಾಜ್ಯಲಕ್ಷ್ಮಿಯೊಡನೆ ನನ್ನ ಹೆಂಡತಿಯಾಗಿ ಈ ವೈಭವವೆಲ್ಲವನ್ನೂ ನೀನು ಅನುಭವಿಸು.

೫೮. ಚಂಡಶಾಸನನ ಮಾತು ಸುನಂದೆಗೆ ಕೋಪವನ್ನುಂಟು ಮಾಡಿತು.

ತನ್ನ ಇದಿರೊಳ್-ತನ್ನ ಎದುರಿನಲ್ಲಿ, ಅ ಖಳಂ-ಆದುಷ್ಟನು ನುಡಿಯಂ-ಮೇಲೆ ಹೇಳಿದ ಮಾತನ್ನು, ನುಡಿಯಲೊಡಂ-ಹೇಳಲಾಗಿ, ಕಡೆಗಣ್ಣಿಂ-ಕಡೆಗಣ್ಣಿನಿಂದ, ಕಿಡಿಸೂಸೆ, ಘೃತ-ತುಪ್ಪದ, ಆಹುತಿಯಂ, ಆಹುತಿಯನ್ನು, ಪೊಡೆವ-ಹೊಡೆಯುವ, ಶಿಖಿ-ಅಗ್ನಿಯ, ಜ್ವಾಲೆಯಂತೆ-ಬಾಲೆ-ಯುವತಿಯಾದ ಸುನಂದೆಯು, ಕನಲ್ದಲ್-ಕೋಪಗೊಂಡಳು.

ದುಷ್ಟನಾದ ಚಂಡಶಾಸನನು ಮೇಲೆ ಹೇಳಿದಂತೆ ನುಡಿಯಲು

ಕಡೆಗಣ್ಣಿನಿಂದ ಕಿಡಿಸೂಸಿ ತುಪ್ಪದ ಆಹುತಿಯನ್ನು ಹೊಡೆಯುವ ಅಗ್ನಿಜ್ವಾಲೆಯಂತೆ ಆ ಸುನಂದೆ ಕೋಪಗೊಂಡಳು.

ವಚನ || ಅಂತು – ಆರೀತಿಯಲ್ಲಿ, ಕನಲ್ದು-ಕೋಪಗೊಂಡು, ಒನಲ್ದು-ಅಪಹಾಸ್ಯದ ಕೋಪದಿಂದ, ಸೈರಿಸಲಾ(ರ)ದೆ

೫೯. ಸುನಂದೆ ಚಂಡಶಾಸನನನ್ನು ಧಿಕ್ಕರಿಸಿ ನುಡಿಯುತ್ತಾಳೆ.

ಪಾಣ್ಬ-ಜಾರನೆ, ಸೆಱೆಸಿಕ್ಕಿಂ-ಸೆರೆಸಿಕ್ಕು, ಪಿಡಿತಂದ-ಹಿಡಿದುತಂದ ದೇಸಿಗಿತಿಯಂ-ದಿಕ್ಕಿಲ್ಲದವಳನ್ನು, ಭೋಗ+ಉಪಭೋಗಗಳಂ-ಸುಖಗಳನ್ನು, ಮಱೆದುಂ-ಮರೆತೂ ಕೂಡ, ಕಾಣದ-ನೋಡದ, ಅನಾಥೆಯಂ-ಅನಾಥೆಯನ್ನು, ನುಡಿವವೋಲ್ ಮಾತನಾಡಿಸುವಂತೆ, ನಿನ್ನ+ಒಂದು ಸಂಪತ್ತಿಯಂ-ನಿನಗಿರುವ ಮಹತ್ತಾದ ಸಂಪತ್ತೊಂದನ್ನು ಕುರಿತು, ಜಱುಚುತಿರ್ದಪೆ-ವ್ಯರ್ಥವಾಗಿ ಹರಟುತ್ತಿರುವೆ. (ನಾಳೆ) ನಿನ್ನ ತಲೆಯುಂ ನಿನ್ನ ತಲೆಯೂ ಕೂಡ, ಕಾರಾಗೃಹದ್ವಾರದೊಳ್ - ಸೆರೆಮನೆಯ ಬಾಗಿಲಲ್ಲಿ, ಮೆಱೆವಾಗಳ್-ಶೋಭಿಸುವಾಗ, ನೀನ್–ನೀನು, ಎನಗೆ-ನನಗೆ, ಮಾಡಲ್‌ವೇಳ್ಪ-ಮಾಡಬೇಕೆಂದಿರುವ, ಸತ್ಕಾರಮಂ-ಉಪಚಾರವನ್ನು, ನುಡಿ.

ಸೆರೆಸಿಕ್ಕು ಹಿಡಿದುತಂದ ಭಿಕಾರಿಯನ್ನು ಮಾತನಾಡಿಸುವಂತೆ ಸೌಖ್ಯಗಳನ್ನು ಮರೆತೂ ಕೂಡ ಕಾಣದ ಅನಾಥೆಯನ್ನು ನುಡಿಸುವಂತೆ, ಮಾತನಾಡುತ್ತ ನಿನ್ನ ಒಂದು ಸಂಪತ್ತನ್ನು ಕುರಿತು ಹರಟುತ್ತಿರುವೆ. ಎಲೆ ಜಾರ, ನಾಳೆಯ ದಿನ ಸೆರೆಮನೆಯ ಬಾಗಿಲಲ್ಲಿ ನಿನ್ನತಲೆ ಬಿದ್ದು ಮೆರೆಯುವಾಗ ನೀನು ನನಗೆ ಮಾಡಬೇಕೆಂದಿರುವ ಸತ್ಕಾರವನ್ನು ನುಡಿ.

ವಚನ || ಎಂದು- ಮೇಲೆ ಹೇಳಿದಂತೆ, ಬೆಟ್ಟವೆಟ್ಟನೆ-ಕಠಿಣವಾಗಿ ಬಯ್ದು, ಬೆಟ್ಟು ಬಿದಿರ್ದು-ಕಠಿಣವಾಗಿ, ನುಡಿದ ಸುನಂದೆಯ ನುಡಿಗೆ, ಏವೈಸಿ–ಅಸಹ್ಯಪಟ್ಟು, ಮುಳಿಯದೆ-ಕೋಪಗೊಳ್ಳದೆ, ಲಜ್ಜೆಯಿಂ-ನಾಚಿಕೆಯಿಂದ, ಚಳಿಯದೆ-ಹೆದರದೆ, ಮತ್ತಂ-ಮತ್ತೆ, ಇಂತೆಂದಂ ಈ ರೀತಿ ನುಡಿದನು.

೬೦. ಚಂಡಶಾಸನನು ಮತ್ತೆ ತನ್ನ ಮನಸ್ಸನ್ನು ಸುನಂದೆಗೆ ನುಡಿದನು.

ಆಂ-ನಾನು, ಕೆಳೆಕೆಟ್ಟು-ಸ್ನೇಹಕೆಟ್ಟು, ಪಗೆಯಾದೆಂ-ನಿನ್ನ ಗಂಡನಾದ ವಸುಷೇಣನಿಗೆ ಶತ್ರುವಾದೆ. ಆಗೆ-ಹಾಗೆ ನಾನು ನಿನ್ನ ಗಂಡನಿಗೆ ಶತ್ರುವಾಗಲು, ವಸುಷೇಣಂ-ವಸುಷೇಣನು, ಇನ್-ಇನ್ನು, ಎನ್ನಕೈಯೊಳ್-ಕೈಯಲ್ಲಿ, ಪೋದಂ-ಸತ್ತುಹೋದನು. ಅದಂ ನಂಬು-ನಾನು ಹೇಳುವ ಈ ಮಾತನ್ನು ನೀನು ನಂಬು. ಅಱಿಯಾಸೆಯಿಂ-ವಸುಷೇಣನನ್ನು ಮತ್ತೆ ನೋಡುವೆನು ಎಂಬ ವ್ಯರ್ಥವಾದ ಆಸೆಯಿಂದ, ನವೆಯದಿರ್-ಕೃಶಳಾಗಬೇಡ. ಆಗ್ರಹಂಬೇಡ-ನನ್ನ ವಿಷಯದಲ್ಲಿ ಕೋಪಬೇಡ. ಸತ್ತು, ಸತ್ಫಳಂ-ಒಳ್ಳೆಯಫಲವನ್ನು, ತೋಱುವ ಕಾಣಿಸಿಕೊಳ್ಳುವ, ಬಾೞ್+ಆಗದಿರು-ಬಾಳೆಯ ಮರದಂತೆ ಆಗಬೇಡ. ಪಾತಿವ್ರತ್ಯದಿಂ-ಪಾತಿವ್ರತ್ಯದಿಂದ, ಬತ್ತಿ ಬಾೞ್ದಳಿರಾಗುತ್ತಿರದೆ,-ಬಾಳು ಬತ್ತಿಹೋದ ಚಿಗುರಿನಂತಾಗಿರದೆ, ಆತ್ಮ-ನಿನ್ನ, ಪರ-ಇತರರ, ಸೌಖ್ಯ ಮತ್ತು ಶ್ರೀ ವಿಲಾಸಂಗಳಂ-ಸಂಪತ್ತುಗಳ ಸೊಗಸನ್ನು, ಆೞ್ವಿರ್-ಮುಳುಗಿರು.

ನಿನ್ನ ಗಂಡನಾದ ವಸುಷೇಣನಲ್ಲಿ ಸ್ನೇಹವನ್ನು ಕೆಡಿಸಿಕೊಂಡು ಅವನಿಗೆ ಶತ್ರುವಾಗಿ, ಹಾಗೆ ನಾನು ಅವನಿಗೆ ಶತ್ರುವಾಗಲು, ವಸುಷೇಣನು ಸತ್ತುಹೋದನು. ನಾನು ಹೇಳಿದ ಈ ಮಾತನ್ನು ನಂಬು. ವಸುಷೇಣನನ್ನು ನೋಡುವೆನು, ಕೂಡುವೆನು ಎಂಬ ವ್ಯರ್ಥವಾದ ಆಸೆಯಿಂದ ಕೃಶಳಾಗಬೇಡ. ನನ್ನಲ್ಲಿ ಕೋಪಬೇಡ. ಸತ್ತು ಸತ್ಫಲವನ್ನು ತೋರುವ ಬಾಳೆಯ ಮರದಂತೆ ಆಗಬೇಡ. ಪಾತಿವ್ರತ್ಯದಿಂದ ಬತ್ತಿ ಈ ನಿನ್ನ ಬದುಕನ್ನು ವ್ಯರ್ಥವಾಗಿ ಬತ್ತಿದ ಚಿಗುರಿನಂತಾಗಿಸಬೇಡ. ನಿನಗೂ ಇತರರಿಗೂ ಸೌಖ್ಯವನ್ನುಂಟುಮಾಡುವ ಸುಖಸಂಪತ್ತುಗಳಲ್ಲಿ ಮುಳುಗು.

ವಚನ || ಎಂಬುದುಂ-ಅವನು ಹೀಗೆಂದು ಹೇಳಲಾಗಿ ಸುನಂದೆ, ಈತಂಗೆ-ಈ ಚಂಡಶಾಸನನಿಗೆ. ಮಾತಂ-ಮಾತನ್ನು, ತಪ್ಪಿನಂ-ತಪ್ಪಿಸಲಾಗುವ, ಉತ್ತರಂ-ಉತ್ತರವನ್ನು, ಕುಡುತ್ತಿರಲೇಕೆ-ಏಕೆ ಕೊಡಬೇಕು ಎಂದು, ಆಕೆ-ಸುನಂದೆ, ಇಂತು ಎಂದಳ್-ಈ ರೀತಿ ಹೇಳಿದಳು.

೬೧. ಸುನಂದೆ ಚಂಡಶಾಸನನಿಗೆ ಕೊಟ್ಟ ಉತ್ತರ ಈ ಎರಡು ಪದ್ಯಗಳಲ್ಲಿದೆ.

ಮಾವಿನ ಕೊಂಬಿನೊಳ್(ನಲ್ಲಿ), ನಲಿದು-ಸಂತೋಷಗೊಂಡು, ನರ್ತಿಪ-ಕುಣಿದಾಡುವ, ಕೋಗಿಲೆ ತನ್ನ ದೇಹಕ್ಕೆ ಪ()ಹತ್ತಿದ, ಅಂಟನಿಂ.ಅಂಟನಿಂದ, ಬೇವಿನ ಕೊಂಬಿನೊಳ್(ನಲ್ಲಿ) ನಲಿವುದೆ-ಸಂತೋಷಗೊಳ್ಳುವುದೆ ? ಹಾಗೆಯೇ, ಪ್ರಿಯನ್+ಇರ್ದಪೋಲ್-ಗಂಡನು ಇರುತ್ತಿರುವಾಗಲೆ, ಅಪ್ರಿಯರ್ಗೆ–ಪ್ರೀತಿಯಿಲ್ಲದವರಲ್ಲಿ, ಸತಿಯರ್-ಪತಿವ್ರತೆಯರಾದ ಸ್ತ್ರೀಯರು, ಏಂ–ಏನು, ಸಂಭಾವನೆಗೈವರೆ, ಮರ್ಯಾದೆಮಾಡುತ್ತಾರೆಯೆ? ಗಡ–ಅಲ್ಲವೆ. ವೀರನ-ಶೂರನಾದವನ-ತೋಳಬಾಳುಮಂ–ಕೈಯಕತ್ತಿಯಂ, ನಾವಿದ-ನಾವಿಕನ ಕೈಯಲ್ಲಿರುವ ಬಾಳುಮಂ-ಕತ್ತಿಯನ್ನು, ಸಮನೆ–ಸಮಾನವಾಗಿಸುತ್ತಾರೆಯೆ? ಮತ್ತೆ-ನನ್ನ, ಭುಜ-ತೋಳಿನ, ಸ್ರಜಂ–ಹೂವು, ಪತ್ತಿಪ-ಅಂಟಿಸುವ, ಸಾಣೆಯೊ?

ಮಾವಿನ ಕೊಂಬೆಯಲ್ಲಿ ಸಂತೋಷದಿಂದ ನಲಿದು ನರ್ತಿಸುವ. ಕೋಗಿಲೆ ಬೇವಿನ ಕೊಂಬೆಯಲ್ಲಿ ನರ್ತಿಸುವುದೆ? ಪತಿವ್ರತೆಯರಾದ ಸ್ತ್ರೀಯರು ಪ್ರಿಯನಿದ್ದಂತೆಯೆ ಅಪ್ರಿಯನನ್ನು ಮನ್ನಿಸುತ್ತಾರೆಯೇ ? ವೀರನ ತೋಳಿನಲ್ಲಿರುವ ಕತ್ತಿಯೂ, ನಾವಿಕನ ತೋಳಕತ್ತಿಯೂ ಒಂದೇ ಸಮನೆ?

೬೨. ವಸುಷೇಣ ನೃಪನೆ-ವಸುಷೇಣನೆ, ಕೈವಿಡಿದ – ನನ್ನ ಕೈಯನ್ನು ಹಿಡಿದ, ಈ ನನ್ನ, ಅಸುವಿಂಗೆ-ಪ್ರಾಣಕ್ಕೂ, ಒಡೆಯಂ-ಯಜಮಾನ. ಹಾಗೆಯೇ ಚಿತಾಗ್ನಿಗೂ, ಅವನೇ ಒಡೆಯಂ-ಒಡೆಯನು ಎಂದರೆ ಅವನ ಚಿತೆಯಲ್ಲಿ ನಾನು ಬಿದ್ದು ನನ್ನ ಒಡಲನ್ನು ಅರ್ಪಿಸಬೇಕು ಎಂದು ಭಾವ. ಒಡಲ್-ನನ್ನದೇಹ ಇಂತು ಎಸೆದ-ಈ ರೀತಿಯಾಗಿ ಶೋಭಿಸಿದ, ಈ ಪಾತೀವ್ರತ್ಯದ, ಮಿಸುಗುವ–ಶೋಭಿಸುವ, ಜಸವೆಣ್ಣ-ಕೀರ್ತಿ ಎಂಬ ಹೆಣ್ಣಿನ ತಲೆಗೆ, ಪುಲ್ಲಂ–ಹುಲ್ಲನ್ನು, ತರ್ಪೆನೆ-ತರುತ್ತೇನೆಯೆ?

ವಸುಷೇಣನೆ ನನ್ನ ಕೈಹಿಡಿದ ಗಂಡ. ನನ್ನ ಪ್ರಾಣಕ್ಕೂ ಅವನೇ ಒಡೆಯ. ಅವನೊಡನೆ ನಾನು ಚಿತೆಯಲ್ಲಿ ಬೀಳದೆ ನನಗೆ ಬೇರೆ ಮಾರ್ಗ

ವಿಲ್ಲ. ಪತಿವ್ರತೆಯೆಂಬ ಕೀರ್ತಿಯನ್ನು ತಲೆಯಲ್ಲಿ ಹೊತ್ತು ನಾನು ಈಗ ಹುಲ್ಲನ್ನು ಮುಡಿಯಲಿ ?

ವಚನ || ಎಂಬುದು-ಹೀಗೆಂದು ಹೇಳಲಾಗಿ, ಆ ಕುಟಿಲಂ-ಮೋಸಗಾರನಾದ ಚಂಡಶಾಸನನು, ಆಕೆಯೊಳ್-ಆ ಸುನಂದೆಯಲ್ಲಿ, ತೆಱಪುಮಂ ತನ್ನ ಬಯಕೆಯನ್ನು ಪೂರ್ತಿಗೊಳಿಸಿಕೊಳ್ಳುವುದಕ್ಕೆ ಅವಕಾಶವನ್ನು ಕಾಣದೆ, ಮುಳಿದು-ಕೋಪಗೊಂಡು, ಮತ್ತಂ-ಮತ್ತೆ, ಇಂತು ಎಂದಂ-ಈ ರೀತಿ ನುಡಿದನು.

೬೩. ಚಂಡಶಾಸನನು ತನ್ನ ನಿರ್ಧಾರವನ್ನು ಸುನಂದೆಗೆ ತಿಳಿಸುತ್ತಾನೆ.

ಅಂಭೋಜ-ಕಮಲದ, ಪತ್ರ-ದಳದಂತೆ, ಈಕ್ಷಣೆ-ಕಣ್ಣುಳ್ಳವಳೆ, ನಾಂ-ನಾನು, ನಿನ್ನನ್ನು, ಬಿಡೆ-ಬಿಡುವುದಿಲ್ಲ. ನೀಂ-ನೀನು, ಸಯೆ-ಸಾಯಲಾಗಿ, ಸಾವೆನ್-ಸಾಯುತ್ತೇನೆ. ಅಲ್ಲದೆ-ಹಾಗಲ್ಲದೆ, ಉೞಿಯೆಂ-ಬದುಕುವುದಿಲ್ಲ. ಒಲ್ದೊಡೇನ್-ಒಲಿದರೆ ಏನಾಯಿತು ಎಂದರೆ ನೀನು ಒಲಿದರೂ ಸರಿಯೆ, ಒಲ್ಲದಿರ್ದೊಡೇನ್-ಒಲ್ಲದಿದ್ದೊಡೆ ಏನಾಯಿತು, ಆಂ-ನಾನು, ಎರಡಿಲ್ಲದೆ-ನಿನ್ನಲ್ಲಿ ಭೇದಭಾವವನ್ನು ಎಣಿಸದೆ, ಒಲ್ದೆನ್-ನಿನ್ನನ್ನು ಪ್ರೀತಿಸಿದೆನು. ಆದ್ದರಿಂದ, ಬೇಱೂರ ಬೇಟಕ್ಕೆ-ಎಂದರೆ ಇನ್ನೊಂದು ಹೆಣ್ಣಿನ ಪ್ರೇಮಕ್ಕೆ, ಬಾಯ್ಬಿಡಲಾಱೆಂ-ಬಾಯಿ ಬಿಡಲಾರೆನು ಎಂದರೆ ಆಸೆ ಪಡಲಾರೆನು. ಎನ್ನ ಮನೆಯೊಳ್-ನನ್ನ ಮನೆಯಲ್ಲಿ, ಸೆಱೆಯಿಂದಂ-ಸೆರೆಯಿಂದಲಾದರೂ, ನೀನ್ ಇರ್ದೆ-ನೀನು ಇರುವೆ ಎಂಬ ಆಸೆಯುಳ್ಳೊಡೆ-ನನ್ನಲ್ಲಿ ಆ ಆಸೆ ಇರುವುದಾದರೆ, ಸಾಲ್ಗುಂ-ಅದೇಸಾಕು. ಬೞಿಕ್ಕೆ-ಅನಂತರ, ರಣದಿಂದಂ-ಯುದ್ಧದಿಂದ, ಅಪ್ಪುದಕ್ಕೆ-ಆಗುವುದು ಆಗಲಿ.

ಕಮಲಗಣ್ಣಿನ ಸುನಂದೆಯೆ, ನಿನ್ನನ್ನು ನಾನು ಬಿಡುವುದಿಲ್ಲ; ನೀನು ಸಾಯಲು ನಾನೂ ಸಾಯುತ್ತೇನೆ. ಹಾಗಲ್ಲದೆ ನಾನು ಬದುಕಿರುವುದಿಲ್ಲ. ನೀನು ನನ್ನನ್ನು ಪ್ರೀತಿಸಿದರೂ ಸರಿಯೆ, ನೀನು ನನ್ನನ್ನು ಬಿಟ್ಟರೂ ಸರಿಯೆ, ನಾನು ನಿನ್ನಲ್ಲಿ ಭೇದ ಭಾವವನ್ನು ಎಣಿಸಿಲ್ಲ. ಒಂದೇ ವಿಧವಾದ ಪ್ರೀತಿಯಿಂದ ನಿನ್ನನ್ನು ಪ್ರೀತಿಸುತ್ತೇನೆ. ಆದ್ದ

ರಿಂದ ಬೇರೆಯವರ ಪ್ರೇಮಕ್ಕೆ ನಾನು ಬಾಯಿ ಬಿಡಲಾರೆ. ನೀನು ನನ್ನ ಮನೆಯಲ್ಲಿ ಸೆರೆಯಾಗಿರುವೆ ಎಂಬ ಆಸೆ ನನ್ನ ಮನಸ್ಸಿನಲ್ಲಿ ಸಂತತವಾಗಿದ್ದರೆ ಸಾಕು. ಇದರ ಮೇಲೆ ಯುದ್ಧದಿಂದ ಆಗುವುದು ಆಗಲಿ.

ವಚನ || ಎಂದು-ಹೀಗೆಂದು, ಚಂಡಶಾಸನನು, ತನ್ನ, ಅಳಿಪಂ-ಆಸೆಯನ್ನು, ಅಡರೆ-ಅಂದರೆ ಚೆನ್ನಾಗಿ ತಿಳಿಯುವಂತೆ, ಚಾಳಿಸಿ–ಕಾತರತೆಯಿಂದ, ನುಡಿದು ಪೋಗುತ್ತುಂ- ಸುನಂದೆಗೆ ತಿಳಿಸಿ ಆ ಸ್ಥಳದಿಂದ ಹೋಗುತ್ತ

೬೪. ಸುನಂದೆಯ ಮನಸ್ಸನ್ನು ತಿರುಗಿಸಲು ಅರುಣಿಕೆ ಎಂಬುವಳನ್ನು ಚಂಡಶಾಸನನು ನಿಯಮಿಸಿದನು.

ನೀಂ-ನೀನು, ತಳೋದರಿಗೆ-ಈ ಹೆಂಗಸಿಗೆ, ಪರಿಚಿತೆ-ತಿಳಿದವಳು, ಮೆಯ್ವ(ಬ)ಟಿ°ಯಿಂ-ಹಿಂದುಗಡೆಯಿಂದ ಎಂದರೆ ನನ್ನ ಹಿಂದೆ, ಮನಮುಂ-ಅವರ ಮನಸ್ಸನ್ನು, ತೊಡಂಕೆ-ಸೇರಿಕೊಳ್ಳುವುದಕ್ಕೆ, ನಾಂ-ನಾನು, ತುರಿಪದಿಂ-ಆತುರದಿಂದ, ಇರ್ದು-ಇದ್ದು, ನಿಂದು-ನೀನು ಅವಳ ಬಳಿ ನಿಂತು, ಅಟಲನ್-ದುಃಖವನ್ನು ಆರಿಸು-ಹೋಗುವಂತೆ ಮಾಡು. ಅಲ್ಲದೆ, ಭೀತಿಯಂ-ಭಯವನ್ನು, ತೋಱು(ರಿ)ಸು. ಅವಳ ಮನಸ್ಸಿನಲ್ಲಿ ಭೀತಿ ಬಹುವಾಗಿ ಮೂಡಿದರೆ, ಗಂಡನ, ಪಂಬಲಂ-ಹಂಬಲನ್ನು, ಒಯ್ಯನೆ+ಆಗಿ-ಒಂದೇ ಸಮನಾಗಿ, ಮನಂ ಅವಳ ಮನಸ್ಸು, ಕೊರಗದೆ ಹೋಗದಂತೆ, ಮತ್ತೆ ಸಂತಮಿಡು-ಸಮಾಧಾನಪಡಿಸು, ಎಂದು ಅರುಣಿಕೆ ಎಂಬಳಂ-ಅರುಣಿಕೆ ಎನ್ನುವವಳನ್ನು, ಕಾಂತೆಯ-ಸುನಂದೆಯ,ಕಾಪಿನೊಳ್-ರಕ್ಷಣೆಯಲ್ಲಿ, ನಿಱಿಸಿ-ಇಟ್ಟು, ಆ ನೃಪಾಳಕಂ-ಆ ದೊರೆಯು,

ನೀನು ಈ ಸುನಂದೆಗೆ ತುಂಬಾ ಪರಿಚಿತಳಾದವಳು. ನನ್ನ ಹಿಂದುಗಡೆಯಲ್ಲಿ ಅವಳ ಮನಸ್ಸು ನನ್ನಲ್ಲಿ ತೊಡಕುವಂತೆ ನೀನು ಪ್ರಯತ್ನಿಸು. ಅವಳ ದುಃಖವನ್ನು ಆರಿಸು. ಅವಶ್ಯಕವಿದ್ದರೆ ಅವಳಿಗೆ ಸ್ವಲ್ಪ ಭಯವನ್ನು ತೋರಿಸು. ಆಕೆ ಗಂಡನ ಹಂಬಲನ್ನು ನಿಧಾನವಾಗಿ ಬಿಡುವಂತೆ, ಮನಸ್ಸು ಕೊರಗದಂತೆ ಅವಳ ಮನಸ್ಸನ್ನು ಸಮಾಧಾನಪಡಿಸು ಎಂದು ಅರುಣಿಕೆ ಎಂಬುವಳನ್ನು ಸುನಂದೆಯ ರಕ್ಷಣೆಗಾಗಿಟ್ಟು ಆ ಬಳಿಕ ದೊರೆ,

ವಚನ || ನೇಸರ್-ಸೂರ್ಯನು, ಮೂಡಲೊಡಂ-ಮೂಡಲಾಗಿ, ಮುನ್ನೆಮುನ್ನೆ-ಈ ಮೊದಲೆ, ಪುಟ್ಟಿದರ್ದ-ಹುಟ್ಟಿದ, ವಿರಹ-ಅಗಲಿಕೆಯ, ಪರಿತಾಪಂ-ಸಂಕಟವು, ತೀರದೆಯುಂ-ತೀರದೆಯಿರಲು, ಏತಱೊಳಂ-ಯಾವರೀತಿಯಲ್ಲಿಯೇ ಆಗಲಿ, ಆ ತಳೋದರಿಯಂ-ಹೆಣ್ಣನ್ನು, ಒಡಂಬಡಿಸಲ್-ಒಪ್ಪಿಸಲು ಬಾರದೆ, ಆ ಕಿತವಂ-ಮೋಸಗಾರನು, ತನ್ನ ಕೈತವದೊಳ್-ಮೋಸದಲ್ಲಿ;

೬೫. ಚಂಡಶಾಸನನು ಸುನಂದೆಯು ಎದುರಿಗೆ ಇಂದ್ರಜಾಲವನ್ನು ಒಡ್ಡಿದನು. ಚಂಡಶಾಸನಂ-ಚಂಡಶಾಸನನು, ಪತಿಯಿರೆ-ಗಂಡನಿದ್ದಂತೆಯೇ, ಎಂದರೆ ವಸುಷೇಣನು ಬದುಕಿರುವಾಗ, ಪಿಂಗದ-ಹಿಂಗದ ಎಂದರೆ ಪೂರ್ತಿಯಾಗದ, ಆಸೆ-ಬಯಕೆಯಿಂದ ಕೂಡಿ, ಮನದ-ತನ್ನ ಮನಸ್ಸಿನ, ಒಂದು ಅಱಿಯಾಸೆಯಿನ್-ಕೆಟ್ಟಆಸೆಯಿಂದ, ಎನ್ನನ್-ನನ್ನನ್ನು, ಈ ಸತಿ-ಈ ಹೆಣ್ಣು, ಒಲ್ಲಳ್-ಬಯಸಳು. ಇವಳಂ-ಇವಳ ಮನಸ್ಸನ್ನು, ಮರುಳ್ಚಿದಪೆಂ-ಹಿಂತಿರುಗಿಸುತ್ತೇನೆ, ಎಂದು ಬೆಸಂ+ಕುಡೆ-ಅಪ್ಪಣೆ ಮಾಡಲು, ಇಂದ್ರಜಾಲಿಗಂ-ಐಂದ್ರಜಾಲಿಕನು, ಜನದ ಕಣ್, ಬೆರಗಪ್ಪಿನಂ-ಬೆರಗಾಗುವಂತೆ, ಪ್ರತಿಬಳಂ-ಶತ್ರುಸೈನ್ಯವು, ಎಯ್ದೆ-ಚೆನ್ನಾಗಿ, ಕೆಟ್ಟುದು-ನಾಶವಾಯಿತು, ವಸುಷೇಣ ನೃಪೇಂದ್ರಂ-ವಸುಷೇಣನೆಂಬ ದೊರೆ, ಅಱಿದಂ-ಸತ್ತನು ಎಂಬ, ಸಂಗತಿಯಂ-ಸಮಾಚಾರವನ್ನು, ಒಡರ್ಚಿದಂ-ಉಂಟು ಮಾಡಿದನು ಎಂದರೆ ಹರಡಿದನು ಎಂದು ಭಾವ.

ವಸುಷೇಣನಿದ್ದಂತೆ ನನ್ನ ಬಯಕೆ ಪೂರ್ತಿಯಾಗದು; ಈಕೆಯ ಮನಸ್ಸನ್ನು ಹಿಂತಿರುಗಿಸುತ್ತೇನೆ, ಎಂದು ಚಂಡಶಾಸನನುಐಂದ್ರಜಾಲಿಕನೊಬ್ಬನಿಗೆ ಅಪ್ಪಣೆ ಮಾಡಲು, ಅವನು ಶತ್ರುಸೈನ್ಯ ನಾಶವಾಯಿತು, ವಸುಷೇಣನು ಸತ್ತನು ಎಂಬ ಸಮಾಚಾರವನ್ನು ಹರಡಿದನು.

ವಚನ || ಆ ವ್ಯತಿಕರಮಂ-ಆ ಕಷ್ಟವನ್ನು, ಕಂಡು, ನಮ್ಮ ಅರಸನ್ (ದೊರೆ), ಇರುಳಿನ-ರಾತ್ರಿಯ, ಕವಿಮು, ಕಾಳಗದೊಳ್-ಯುದ್ಧದಲ್ಲಿ, ಮುತ್ತಿದ, ಬೀಡಂ-ಬೀಡಾರವನ್ನು, ತೊತ್ತಱದುಱದು-ಚೆನ್ನಾಗಿ ತುಳಿದು, ಪ(ಹ)ಗೆಯ, ಪಂದಲೆ (ಪಸಿದು+ತಲೆ)-ರಕ್ತದಿಂದ ಕೂಡಿದ ಹಸಿಯ ತಲೆ, ಕೆಯ್ಗೆ-ಕೈಗೆ, ಬಂದುದು-ಬಂದಿತು. ಇನ್ನೇನ್+ಇನ್ನೇನ್

ಇನ್ನೇನು, ಇನ್ನೇನು, ಎಂದು ಕೋಟಿಯೊಳಗೆ, ಜನಂ–ಜನರು, ಕೋಟಿತೆಱದಿಂ-ಕೋಟಿ ರೀತಿಯಲ್ಲಿ, ನಾಟಕಂ ನಲಿದು-ನಟನೆಮಾಡಿ, ಸಂತೋಷದಿಂದ, ಬೊಬ್ಬಿಱಿಯುತ್ತಿರೆ-ಬೊಬ್ಬೆಹಾಕುತ್ತಿರಲು, ಸುನಂದಾದೇವಿ, ಇರ್ದ(ದ್ದ), ಸೆರೆವನೆಗೆ-ಸೆರೆಮನೆಗೆ, ತಾನೆ ಬಂದು-ಚಂಡಶಾಸನನು ತಾನೆಬಂದು,

೬೬. ಸುನಂದೆಯ ಮುಂದೆ ವಸುಷೇಣನ ತಲೆಯನ್ನು ಈಡಾಡಿದನು.

ಸುನಂದೆ-ಸುನಂದೆಯೇ, ಎ(ನ)ನಗೆ, ವಸುಷೇಣನೆ-ವಸುಷೇಣನೊಬ್ಬನೆ, ಪತಿ ಎಂದು-ಗಂಡನೆಂದು, ಸಿಡಿಲ್ವೆ–ಸಿಡಿದು ಬೀಳುವೆ, ಮಾಲ್ಪ ಮಾಡುವ, ಸೋವಡಿಕೆಯನ್-ಉಪಚಾರವನ್ನು, ಈ ಬಸಿವ-ಈ ರಕ್ತದಿಂದ ಬಸಿಯುತ್ತಿರುವ, ತಲೆಗೆ, ಮಾಡಲಿ, ಎನುತುಂ-ಎನ್ನುತ್ತ, ಮಾಯಾವಿ-ಕಪಟಿಯಾದ ಚಂಡಶಾಸನನು, ಪತಿಯ-ಅವಳ ಗಂಡನ, ಮಾಯದ, ಶಿರಮಂ-ತಲೆಯನ್ನು, ಈಡಾಡಿಸಿದಂ ಅವಳ ಮುಂದೆ ಎರಚಾಡಿಸಿದನು.

'ಸುನಂದೆ, ನಿನಗೆ ವಸುಷೇಣನೆ ಗಂಡನೆಂದು ಏಕೆ ಸಿಡಿದು ಬೀಳುವೆ ? ನೀನು ಮಾಡುವ ಉಪಚಾರವನ್ನು, ರಕ್ತದಿಂದ ಬಸಿಯುವ ಈ ತಲೆಗೆ ಮಾಡು' ಎನ್ನುತ್ತ ಕಪಟಿಯಾದ ಚಂಡಶಾಸನನು ಅವಳ ಗಂಡನ ಮಾಯದ ತಲೆಯನ್ನು ಅವಳ ಮುಂದೆ ಎರಚಾಡುವಂತೆ ಮಾಡಿದನು.

ವಚನ || ಅಂತು-ಆ ರೀತಿಯಲ್ಲಿ, ತಂದು, ಇೞಿಪಿದ-ಇಳಿಸಿದ, ಸಿರಮುಮಂ-ತಲೆಯನ್ನು, ಕಳ್ದು-ಕದ್ದು ತಱ(ರಿ)ದ, ವಲ್ಲಭನ-ಗಂಡನ, ಮಣಿಮುಕುಟ ರತ್ನದ ಕಿರೀಟ, ಕೇಯೂರ-ತೋಳಬಂದಿಯು, ಮಂಡಳ ಕಾಂತಿಯಿಂದ, ಆದೀಪನ-ಬೆಳಗುತ್ತಿದ್ದ, ಮಂಡನಮುಮಂ-ಆಭರಣವನ್ನು, ಪೇರುರದೊಳ್-ಅಗಲವಾದ ಎದೆಯಲ್ಲಿ ; ಓರಂತೆ-ಒಂದೇಸಮನಾಗಿ, ಮೆಱಿ(ರೆ)ವ, ತೋರಮುತ್ತಿನ-ದೊಡ್ಡಮುತ್ತಿನ, ಹಾರಮುಮಂ-ಹಾರವನ್ನು, ಕಾಣಲೊಡಂ-ಕಾಣಲಾಗಿ,

೬೭. ವಸುಷೇಣನ ಮಾಯಾಶಿರಸ್ಸನ್ನು ನೋಡಿದೊಡನೆಯೇ ಸುನಂದೆಯ ಪ್ರಾಣ ಹೊರಟುಹೋಯಿತು.

ಹೃದಯದೊಳ್+ಇರ್ದ-ತನ್ನ ಹೃದಯದಲ್ಲಿದ್ದ, ವಲ್ಲಭನನ್– ಗಂಡನನ್ನು, ಆಕ್ಷಣ-ಆಗಲೆ, ಭೀತಿಯಿಂ-ಭಯದಿಂದ, ಈಕ್ಷಿಪಂತೆ- ನೋಡುವ ಹಾಗೆ, ಅಲರ್+ಕಣ್ ಪೊಣರ್-ಹೂವಿನಂತೆ ಅರಳಿದ ಅವಳ ಕಣ್ಣುಗಳ ಜೋಡಿ, ಮುಚ್ಚಿದುವು. ತಡವಿ ನೋಡುವವೊಲ್-ಸವರಿ ನೋಡುವಂತೆ, ಕುಚ ಮಧ್ಯದಲ್ಲಿಗೆ-ಮೊಲೆಗಳ ನಡುವೆ, ಕರಪಲ್ಲವಂ- ಚಿಗುರಿನಂತಿರುವ ಅವಳ ಕೈಯ್ ; ಆದುದು-ಆಯಿತು, ಎಂದರೆ ಪ್ರಾಣ ಬಿಡುವ ಸಮಯದಲ್ಲಿ ಸುನಂದೆಯ ಕೈ ಅವಳ ಎದೆಯ ಮೇಲೆ ಹೋಯಿತು. ಸರಮನ್-ಸ್ವರವನ್ನು, ಆಲಿಸುವಂತೆ-ಕೇಳುವಹಾಗೆ, ಮೊಗಂ–ಮುಖವು, ಮಲಂಗಿತು-ಮಲಗಿತು. ಅಂಗದೊಳ್-ಅಂಗಗ ಳಲ್ಲಿ, ಎರ್ದೆ ಎಂದರೆ ಹೃದಯವು, ಶೂನ್ಯಂ+ಆಗೆ–ಶಬ್ದವನ್ನು ನಿಲ್ಲಿಸಲು, ಅಸಿತ ಬಿಳಿಯ, ಅಬ್ಜ-ಕಮಲದಂತೆ, ನೇತ್ರೆಯಾ-ಕಣ್ಣುಳ್ಳ ಸುನಂದೆಯ, ಅಸು-ಪ್ರಾಣ, ಅರಸುವಂತೆ-ಹುಡಕಲು ಹೊರಟಿರುವಂತೆ ಹೋಯಿತು-ಹೋಯಿತು.

ಹೃದಯದಲ್ಲಿದ್ದ ತನ್ನ ಗಂಡನನ್ನು ಆಕ್ಷಣವೇ ನೋಡುವವಳಂತೆ ಅವಳ ಎರಡು ಕಣ್ಣುಗಳು ಮುಚ್ಚಿದವು. ಸವರಿ ನೋಡುವಹಾಗೆ ಅವಳ ಕೈ ಎದೆಯ ಮೇಲೆ ಹೋಯಿತು. ಶಬ್ದವನ್ನು ಕೇಳುವಂತೆ ಮುಖ ಮಲಗಿಕೊಂಡಿತು. ಹೃದಯವು ಶೂನ್ಯವಾಗಲು, ಏನನ್ನೋ ಹುಡುಕು ವಂತೆ ಸುನಂದೆಯ ಪ್ರಾಣಪಕ್ಷಿ ಹಾರಿಹೋಯಿತು.

೬೮. ಈ ಎರಡು ಪದ್ಯಗಳಲ್ಲಿ ಸುನಂದೆಯ ಪ್ರಾಣ ಹೋದು ದನ್ನು ವರ್ಣಿಸುತ್ತಾನೆ.

ಬಟ್ಟಿಯಟ್ಟಿ-ನನ್ನ ಬಳಿಗೆ ದೂತರನ್ನು ಕಳುಹಿಸಲು, ಬಂದು, ಮುನ್ನಂ ಈ ಮೊದಲೇ, ಪುಟುವಗೆಗೆ-ಹುಳುವಿನಂತಿರುವ ಹಗೆಗೆ, ಒಳ ಗಾದಳ್-ಸಿಕ್ಕಳು, ಎಂದು, ಸಾವಾಸಿಗಳಂ-ಸಹವಾಸಿಗಳನ್ನು, ಎಂದರೆ ತನ್ನ ಜೊತೆಯವರನ್ನು, ವಸುಷೇಣನು, ಕಟ್ಟಿಪದೆ-ಕಳುಹಿಸದೆ, ನಲ್ಲಂ- ಪ್ರಿಯನು, ತಲೆಯಂ-ನನ್ನನ್ನು ಬಿಡಿಸಿಕೊಳ್ಳುವ ಯತ್ನದಲ್ಲಿ ತನ್ನ ತಲೆ

ಯನ್ನೇ ಕಳೆದುಕೊಂಡು ಅವನ ಆ ತಲೆಯನ್ನೇ ನನ್ನ ಬಳಿಗೆ, ಬಟ್ಟಿ ಯಟ್ಟಿದನ್- ನನ್ನ ಬಳಿಗೆ ಕಳುಹಿಸಿದನು, ಎಂದು ಶಶಿಮುಖಿಯಾ- ಚಂದ್ರಮುಖಿಯಾದ ಸುನಂದೆಯ, ಅಸು-ಪ್ರಾಣ, ಪೋದುದು- ಹೋಯಿತು.

ನನ್ನನ್ನು ತನ್ನ ಬಳಿಗೆ ಕರೆಯಿಸಿಕೊಳ್ಳಲು ದೂತರನ್ನು ವಸುಷೇಣನು ಅಟ್ಟಿದರೆ ನಾನು ನೀಚನಾದ ಶತ್ರುವಿಗೆ ಒಳಗಾಗುವಳೆಂದು ತಿಳಿದು, ನನ್ನನ್ನು ಬಿಡಿಸಿಕೊಳ್ಳಲು ತನ್ನ ಸಹವಾಸಿಗಳಾರನ್ನೂ ಕಳುಹಿಸದೆ ನನ್ನ ಪ್ರಿಯನಾದ ವಸುಷೇಣನು ತನ್ನ ತಲೆಯನ್ನೇ ನನಗಾಗಿ ಒಪ್ಪಿಸಿ ಅದನ್ನೇ ಕಳುಹಿಸಿದನೆಂದು ಆ ಚಂದ್ರಮುಖಿಯ ಪ್ರಾಣ ಹೊರಟುಹೋಯಿತು.

೬೯. ಇನಿಯನ್+ಇರೆ-ಗಂಡನಿದ್ದಂತೆಯೆ, ನೋಡ-ನೋಡು, ಮತ್ತೊರ್ಬನ-ಇನ್ನೊಬ್ಬನ, ಕಣ್ಗಂ-ಕಣ್ಣುಗಳಿಗೂ, ಬಗೆಗಂ-ಮನಸ್ಸಿಗೂ ಒಪ್ಪು+ಇದು+ಅಪ್ಪುದು-ಈ ದೇಹ ಆಕರ್ಷಕವಾಗುತ್ತದೆ. ಈ ತನುವನಿದಂ-ಈ ದೇಹವನ್ನು, ಸುಡಲಿ, ಎಂದು, ಜೀವಂ-ಜೀವವು, ಮುನಿದಂತಿರೆ-ಕೋಪಗೊಂಡಿತೆನ್ನುವಂತೆ, ಶಶಿಮುಖಿಯಾ-ಚಂದ್ರಮುಖಿಯಾದ ಸುನಂದೆಯು, ಅಸು–ಪ್ರಾಣ, ಬಿಟ್ಟುಪೋಯಿತು-ಬಿಟ್ಟು ಹೋಯಿತು.

ತನ್ನ ಪ್ರಿಯನು ಇದ್ದಂತೆಯೇ ಈ ದೇಹ ಇನ್ನೊಬ್ಬನ ಮನಸ್ಸಿಗೂ, ಕಣ್ಣುಗಳಿಗೂ, ಆಕರ್ಷಕವಾಯ್ತು, ಇದನ್ನು ಸುಡಲಿ ಎನ್ನುವಂತೆ ಸುನಂದೆಯು ಪ್ರಾಣ ಅವಳ ದೇಹವನ್ನು ಬಿಟ್ಟಿತು.

ವಚನ || ಆಗಳ್ ಆ ಸಮಯದಲ್ಲಿ, ಆ ವ್ಯತಿಕರಮಂ-ಆ ಘಟನೆಯನ್ನು ಕಂಡು, ಅತಿ-ಹೆಚ್ಚಾದ, ಚಕಿತ-ಆಶ್ಚರ್ಯಗೊಂಡ, ಹೃದಯನುಂ-ಮನಸ್ಸುಳ್ಳವನೂ, ಆಕುಳಿತ-ಆಕುಲಗೊಂಡ ವಿಳೋಕನುಂ-ನೋಟವುಳ್ಳವನೂ, ಆಗಿ

೭೦. ಚಂಡಶಾಸನನು ಮೂರ್ಛಿತನಾದನು.

ಸ್ಮರನೊಳ್–ಮನ್ಮಥನಲ್ಲಿ, ದಾಯಿಗನಾಗಿ-ಪಾಲುಗೊಂಡು, ಬೆಂದ-ಹಾಳಾದ, ವಿಧಿ, ಒಂದಂ ನಾನು ಎಣಿಸಿದುದಕ್ಕಿಂತ ಬೇರೊಂದನ್ನು, ಮಾಡಿದನ್-ಮಾಡಿದನು. ಬೆರಗಿಂದೆ-ಸುನಂದೆಗೆ ಆಶ್ಚರ್ಯವನ್ನು ಉಂಟು

ಮಾಡಿ, ಆ ಮೂಲಕ ಅವಳನ್ನು, ಕೂಡುವೆಂ-ಕೂಡುವೆನು, ಎಂದು ಇದನ್+ಇಂತು-ಇದನ್ನು ಈ ರೀತಿಯಲ್ಲಿ, ಮಾಡೆ-ಮಾಡಲಾಗಿ, ಸುನಂದೆಗೆ, ಮರಣಂ-ಸಾವು, ಮೂಡಿತ್ತು-ಉಂಟಾಯಿತು. ಹೋ-ಅಯ್ಯೋ, ಆನ್-ನಾನು. ಬೆಂದೆಂ-ಹಾಳಾದೆನು, ಉರಿದೆಂ-ಉರಿದುಹೋದೆನು, ನಂದಿದೆಂ-ನನ್ನ ಜೀವನದ ಬೆಳಕು ನಂದಿದಂತಾದೆನು, ಎಂದು, ಚಂಡಶಾಸನನು ಬಂದು, ಭರದಿಂ-ರಭಸದಿಂದ, ತಳ್ತು+ಅಂತು-ಸುನಂದೆಯ ದೇಹವನ್ನು ಸೇರಿ, ತಟಿಕ್ಕೈಸೆ-ಗಾಢವಾಗಿ ಅಪ್ಪಿಕೊಳ್ಳಲು, ತತ್-ಆ, ತರುಣೀ-ಹೆಂಗಸಿನ, ಗಾತ್ರದ-ದೇಹದ, ಸೋಂಕು-ಮುಟ್ಟುವಿಕೆ, ಸವುನಿಸೆ-ಉಂಟಾಗಲು, ಖಳಂ-ಆ ದುಷ್ಟನು, ಮೂರ್ಛಾಪನ್ನಂ+ಆದಂ-ಮೂರ್ಛೆ ಹೊಂದಿದನು.

ಹಾಳುವಿಧಿ ಮನ್ಮಥನೊಡನೆ ಪಾಲುಗೊಂಡು ನಾನೊಂದನ್ನು ಎಣಿಸಿದರೆ ತಾನೊಂದನ್ನು ಮಾಡಿತು. ಸುನಂದೆಗೆ ಈ ರೀತಿಯಾಗಿ ಆಶ್ಚರ್ಯವನ್ನುಂಟುಮಾಡಿ ಅವಳನ್ನು ಕೂಡುವೆನೆಂದಿದ್ದರೆ ಅವಳಿಗೆ ಸಾವುಂಟಾಗಬೇಕೇ? ಅಯ್ಯೋ, ನಾನು ಹಾಳಾದೆ, ಉರಿದೆ, ನಂದಿಹೋದೆ, ಎಂದು ರಭಸದಿಂದ ಬಂದು ಅವನು ಸುನಂದೆಯ ದೇಹವನ್ನು ಆಲಿಂಗಿಸಿಕೊಂಡನು. ಆ ತರುಣಿಯ ದೇಹದ ಸೊಂಕು ಉಂಟಾದೊಡನೆಯೆ ಚಂಡಶಾಸನು ಮೂರ್ಛೆಹೋದನು.

೭೧. ಚಂಡಶಾಸನನ ಮೇಳದ ಸ್ತ್ರೀಯರು ಅವನನ್ನು ಉಪಚರಿಸಿದರು.

ಅವನಂ-ಚಂಡಶಾಸನನನ್ನು, ಚಾಮರದ, ಅಡಪದ-ತಾಂಬೂಲದ ಡವಕೆಯ-ಪೀಕದಾನಿಯ, ಕೀಱ್ವಾಳ-ಕಿರುಗತ್ತಿಯ, ಮೇಳದ-ಜೊತೆಯ, ಅಂಗನೆಯರ್-ಸ್ತ್ರೀಯರು, ಬೀಸುವ, ಬಿಜ್ಜಣಿಗೆಯ (ವಿಜನಿಕಾ-ಸಂ) ಮಲಯಜ-ಶ್ರೀ ಗಂಧದ, ನವ-ಹೊಸದಾದ, ಜಲಕಣದ-ತುಂತುರುಹನಿಗಳಿಂದ ಕೂಡಿದ, ಎಲರ-ಗಾಳಿಯ, ಸೋಂಕಿನಿಂ-ಸೋಂಕಿನಿಂದ, ನಿಲೆ-ಚಂಡಶಾನನು ಬೀಳದೆ ನಿಲ್ಲುವಂತೆ, ಪಿಡಿದರ್-ಅವನನ್ನು ಹಿಡಿದರು.

ಮೂರ್ಛೆಗೊಂಡ ಚಂಡಶಾಸನನನ್ನು, ಚಾಮರದ, ಹಡಪದ, ಡವಕೆಯ, ಕಿರುಗತ್ತಿಯ, ಮೇಳದ ಸ್ತ್ರೀಯರು ಬೀಸುವ ಬೀಸಣಿಗೆಯ

ಶ್ರೀಗಂಧದ ತುಂತುರು ಹನಿಗಳಿಂದ ಕೂಡಿದ ಗಾಳಿಯ ಸೋಂಕಿನಿಂದ, ಬೀಳದಂತೆ ಹಿಡಿದುಕೊಂಡರು.

ವಚನ || ಅಂತು-ಆ ರೀತಿಯಲ್ಲಿ, ಮೂರ್ಛೆಯಿಂ - ಮೂರ್ಛೆಯಿಂದ (ಎಚ್ಚತ್ತು), ಬೆಚ್ಚನೆಸುಯ್ದು-ಬಿಸಿಯಾಗಿ ನಿಟ್ಟುಸಿರುಬಿಟ್ಟು, ಬೆದೆಬೆದೆ ಬೆಂದು ನೊಂದು, ನಿಂದಿಸಿಕೊಂಡು-ತನ್ನನ್ನೇ ತಾನು ನಿಂದಿಸಿಕೊಂಡು, ಮಾಣದೆ-ಸುಮ್ಮನಿರದೆ

೭೨. ಚಂಡಶಾಸನನು ಸುನಂದೆಗಾಗಿ ಹಂಬಲಿಸಿದನು.

ಚಂಡಶಾಸನನು ಸುನಂದೆಯ ದೇಹವನ್ನು ನೋಡಿ "ಎಲೆ ದೇವಿ, ನೋಡಿ-ನನ್ನನ್ನು ನೋಡಿ, ಕನಲ್ದು-ಕೋಪಗೊಂಡು, ಬಾಯ್ ಮುನಿದು - ಬಾಯಿಂದಲೇ ಕೂಡ ನೋಡು ಎಂದರೆ ಮಾತನಾಡದೆ ಮುಖದಲ್ಲಿ ಕೋಪವನ್ನು ಕಾಣಿಸಿಕೊಂಡು, ಮೋನದಿಂ-ಮೌನದಿಂದ, ನೀಂ-ನೀನು, ಏಕೆ-ಏತಕ್ಕಾಗಿ, ಮನಂ ನೋಡುವೆ-ನನ್ನ ಮನಸ್ಸನ್ನು ಪರೀಕ್ಷಿಸುವೆ? ಸಾವಿನಿಂ-ಸಾವಿನಿಂದ ಎಂದರೆ ಸಾವಿನೊಡನೆ ಸರಸವಾಡುವರೆ ? ಮಱುವೆುಯ್ಯೊಳಾದೊಡಂ-ಬೇರೊಂದು ಹುಟ್ಟಿನಲ್ಲಾದರೂ ಕೂಡದೆ-ನಿನ್ನೊಡನೆ ಕೂಡದೆ, ಮಾಣೆಂ-ಇರುವುದಿಲ್ಲ, ಅಬ್ಜ (ಕಮಲ) ದಳಲೋಚನೆ-ಕಮಲದ ದಳದಂತೆ ಕಣ್ಣುಳ್ಳ ಸುನಂದೆ, ನಿನ್ನೊಡನೆ-ನಿನ್ನ ಜೊತೆಯಲ್ಲಿ, ಇಂದು-ಈಗ, ಧೂಮ-ಹೊಗೆಯ, ಸೌಧ-ಉಪ್ಪರಿಗೆಯ, ಗೃಹದೊಳ್-ಮನೆಯಲ್ಲಿ, ಶಿಖಿ-ಬೆಂಕಿ ಎಂಬ, ಪಲ್ಲವ-ಚಿಗುರಿನ ರಾಗ-ಕೆಂಪಾದ, ತಲ್ಪದೊಳ್-ಹಾಸಿಗೆಯಲ್ಲಿ, ಮೈಗೆ ಮೈಗೊಡುವೆಂ-ನಿನ್ನ ಮೈಯೊಡನೆ ನನ್ನ ಮೈಯನ್ನು ಕೂಡಿಸುತ್ತೇನೆ, ಎಂದರೆ ನಿನ್ನೊಡನೆ ನಾನು ಸಾಯುತ್ತೇನೆ ಎಂದು ಭಾವ. ಇದು ಚಂಡಶಾಸನನಿಗೆ ಸುನಂದೆಯಲ್ಲಿದ್ದ ಉನ್ಮಾದವನ್ನು ತೋರಿಸುತ್ತದೆ. ಲೋಕದಲ್ಲಿ ಗಂಡನು ಸತ್ತಾಗ ಹೆಂಡತಿಯು ಸಹಗಮನ ಮಾಡುವುದು ಪದ್ಧತಿ. ಆದರೆ ಸುನಂದೆ ಪರಸ್ತ್ರೀ. ಅವಳು ಸತ್ತಳೆಂದರೆ ಅವಳೊಡನೆ ಬೆಂಕಿಗೆ ಬೀಳುತ್ತೇನೆ ಎನ್ನುವ ಚಂಡಶಾಸನನ ಹುಚ್ಚಿಗೆ ಏನೆಂದು ಹೇಳೋಣ? ಆದರೆ, ಆ ಹುಚ್ಚನ್ನೂ ಮೆಚ್ಚಬೇಕಲ್ಲವೆ.

ಚಂಡಶಾಸನನು ಸತ್ತುಬಿದ್ದಿದ್ದ ಸುನಂದೆಯನ್ನು ನೋಡಿ "ಎಲೆ

ದೇವಿ, ನೀನು ನನ್ನನ್ನು ನೋಡಿ ಕೋಪಗೊಂಡು ಅದನ್ನು ಮುಖದಲ್ಲಿ ವ್ಯಕ್ತಪಡಿಸಿ ಮೌನದಿಂದ ಇದ್ದು ನನ್ನ ಮನಸ್ಸನ್ನೇಕೆ ಪರೀಕ್ಷಿಸುವೆ? ಸಾವಿನೊಡನೆ ಸರಸವಾಡುವರೆ?(ನೀನು ಮಾತನಾಡದಿದ್ದರೆ ನನಗೆ ಸಾವು ಎಂದು ಭಾವ). ಬೇರೊಂದು ಹುಟ್ಟಿನಲ್ಲಾದರೂ ನಾನು ನಿನ್ನೊಡನೆ ಕೂಡದಿರುವುದಿಲ್ಲ. ಕಮಲಮುಖಿಯೇ, ಹೊಗೆಯಿಂದ ಕೂಡಿದ ಬೆಂಕಿಯಲ್ಲಿ ಈ ದಿನ ನಿನ್ನೊಡನೆ ನಾನು ಮೈಗೆ ಮೈ ಕೂಡುತ್ತೇನೆ.

ವಚನ || ಎಂದು–ಮೇಲೆ ಹೇಳಿದ ರೀತಿಯಲ್ಲಿ. ಬಾಯಬಿದು-ಬಾಯಿಬಿಟ್ಟು, ಪಱಯಿಸಿ-ಪ್ರಲಾಪಿಸಿ, ಬಸಮೞಿದು-ವಶತಪ್ಪಿ, ಅಸುವೊ(ಪೊ)ೞೆಯಾಗಿ–ಪ್ರಾಣಭಾರವಾಗಿ, ಮನಮನ್–ಮನಸ್ಸನ್ನು ಅಱಿದು-ತಿಳಿದು, ಕಳವಳಿಸಿ,

೭೩. ಚಂಡಶಾಸನನು ಸುನಂದೆಯೊಡನೆ ಪ್ರಾಣತ್ಯಾಗಮಾಡಲು ನಿಶ್ಚಯಿಸಿದನು.

ಎ(ನ)ನಗೆ, ಇನ್ನು, ಓಲಗಸಾಲೆ-ಈ ಸಭಾಸ್ಥಾನವು, ಏಕೆ, ಇದು, ವಿಮಾನಂ-ಚಟ್ಟ, ಲೋಲಲೋಚನೆಯಂ-ಚಂಚಲವಾದ ಕಣ್ಣುಳ್ಳ, ನಂದೆಯಂ ಸುನಂದೆಯನ್ನು, ಇಲ್ಲಿ-ಇದರಲ್ಲಿ, ಕುಳ್ಳಿರಿಸಿ, ಕೂಡೆ-ನನ್ನ ಜೊತೆಯಲ್ಲಿಯೇ, ಬಱಸಲ್ಪ-ಬರತಕ್ಕ, ಅಂತಃಪುರ ಸ್ತ್ರೀಯರ್-ಅಂತಃಪುರಸ್ತ್ರೀಯರು, ಆಳ್ತನಮಂ ಪರಾಕ್ರಮವನ್ನು, ತೋಱುವ-ತೋರಿಸತಕ್ಕ, ಲೆಂಕರೊಳ್-ಭಟರಲ್ಲಿ, ನುಡಿಯುವೇೞ್ ಈ ನನ್ನ ಮಾತನ್ನು ನುಡಿಯುಂತೆ ಹೇಳು. ವಿದ್ಯಾಜನಂ-ವಿದ್ಯಾಜನರು, ಬರ್ಕೆ-ಬರಲಿ. ಚಂದನಗಂಧಾವಿಧದಿಂ-ಶ್ರೀಗಂಧದಿಂದ, ಎನ್ನ-ನನ್ನ, ವಿರಹ-ಅಗಲಿಕೆ ಎಂಬ, ಜ್ವಾಲೆಯ+ಅಗ್ನಿಯನ್-ಬೆಂಕಿಯನ್ನು, ನಂದಿಪೆನ್–ಆರಿಸುತ್ತೇನೆ.

ನನಗೆ ಈ ಇನ್ನು ಓಲಗವೇಕೆ ? ಈ ವಿಮಾನದಲ್ಲಿ ಲೋಲಲೋಚನೆಯಾದ ಸುನಂದೆಯನ್ನು ಕುಳ್ಳಿರಿಸಿ. ನನ್ನೊಡನೆ ಬರತಕ್ಕ ಅಂತಃಪುರ ಸ್ತ್ರೀಯರಿಗೆ, ಪರಾಕ್ರಮವನ್ನು ತೋರುವ ಭಟರಿಗೆ ಈ ನನ್ನ ಮಾತನ್ನು ಹೇಳು. ವಿದ್ಯಾಜನರು ಬರಲಿ. ನನ್ನ ವಿರಹಾಗ್ನಿಯನ್ನು ಶ್ರೀಗಂಧದಿಂದ ನಂದಿಸುತ್ತೇನೆ.

ವಚನ || ಎಂದು-ಚಂಡಶಾಸನನು ಹೀಗೆಂದು ನುಡಿದು, ತನ್ನ, ಲಕ್ಷ್ಮೀಭವನಂ+ಎನಿಸುವ-ಐಶ್ವರ್ಯಕ್ಕೆ ನೆಲೆವನೆಯೆನಿಸಿದ, ಉಪರಿ ಮಂಡಪಮನೆ-ಮೇಲ್ತಿದ ಮಂಟಪವನ್ನೇ, ಚಿತ್ತಕ್ಕೆ-ಮನಸ್ಸಿಗೆ, ಮಾಡಿ, ಎಂದರೆ ಅದನ್ನೇ ಒಪ್ಪಿಕೊಂಡು, ಸುನಂದಾದೇವಿಯುಂ( ಯೂ), ತಾನುಂ( ನು), ಏಕಾಸನದೊಳ್-ಒಂದೇ ಪೀಠದಲ್ಲಿ, ಕುಳ್ಳಿರ್ದು-ಕುಳಿತು ಕೊಂಡು, ರಾಣಿಯವಾಸದ, ಪೆಂಡವಾಸದ-ಅಂತಃಪುರದ, ಭಾಷೆಯ-ಶೂರರಾದ, ಲೆಂಕರ-ಭಟರ, ಭಾರತಿಕನಿಕರದ,-ನಟಸಮೂಹದ, ಓಲಗದ, ಕೇಳೀ, ವಿಲಾಸಮಂ-ವಿನೋದದ ಸೊಗಸನ್ನು, ಕೆಟಿಗೆ-ಹಿಂದಕ್ಕೆ, ತಗುಳ್ಚಿದ-ಅಟ್ಟಿದ, ಹುತವಹ-ಅಗ್ನಿಯ, ಜ್ವಾಲಾ-ಜ್ವಾಲೆಯ, ಕಲಾಪಮಂ-ಸಮೂಹವನ್ನು, ಮೆಚ್ಚಿದಂತೆ, ಮೂರ್ಛೆಗೊಳ್ವಿನಂ-ಮೂರ್ಛೆ ಅಮರಿದಹಾಗೆ, ಒಡನೆ+ಅಟಿಯಲ್-ಜೊತೆಯಲ್ಲಿಯೇ ಸಾಯಲು, ಪರಿಚ್ಛೇದಿಸಿದ-ನಿಶ್ಚೈಸಿದ, ಕುಲಸ್ವಾಮಿಯ-ತಮ್ಮ ಒಡೆಯನಾದ ಚಂಡಶಾಸನನ, ಅವಸಾನಸಮಯಂ+ಸಾವಿನ ಸಮಯ ಬರಲು,

೭೪. ಅಂತಃಪುರದ ಹೆಣ್ಣೊಬ್ಬಳು ಆ ಸಮಯದಲ್ಲಿ ಈ ರೀತಿ ನುಡಿಯುತ್ತಾಳೆ-

ಅಬ್ಜೇಕ್ಷಣೇ-ಕಮಲದಂತೆ ಕಣ್ಣುಳ್ಳ ಗೆಳತಿಯೇ, ನಮ್ಮ ಪ್ರಿಯನಾದ ಚಂಡಶಾಸನನು, ನಗೆಗಂ-ಇತರರರು ತನ್ನನ್ನು ನೋಡಿ ನಗುವರೆಂಬುದಕ್ಕೂ, ನಾಚದೆ, ಮೇಲಾಗಿ ಇಷ್ಟು ದಿನವೂ ಅವನನ್ನು ಪ್ರೀತಿಸಿದ, ನಮ್ಮಂ-ನಮ್ಮನ್ನು, ಒಲ್ಲದೆ-ಬಯಸದೆ, ಪರಸ್ತ್ರೀಗೆ-ಪರರ ಹೆಣ್ಣಿಗೆ, ಒಲ್ದು-ಮನಸ್ಸನ್ನು ತೆತ್ತು, ಒಲ್ದವಳ್-ತಾನು ಯಾರನ್ನು ಪ್ರೀತಿಸಿದ್ದನೊ ಅವಳು, ಸತ್ತೊಡೆ-ಸಾಯಲಾಗಿ, ತಾಂ-ತಾನು, ಪ್ರಾಣಮನ್-ಜೀವವನ್ನು ಅರಸಂ-ದೊರೆ ಇತ್ತಪಂ ಗಡ-ತೇರುವನಲ್ಲವೆ? ಅಕ್ಕ, ನೋಡು, ಮಾವಿಂಗೆ-ಮಾವಿಗೆ, ಮಲ್ಲಿಗೆಗಳ್(ಳು), ಕೂರ್ತೊಡೆ-ಪ್ರೀತಿಸಲಾಗಿ, ವಸಂತಶ್ರೀಗೆ-ವಸಂತಲಕ್ಷ್ಮಿಗೆ, ಮಾವು, ಕೂರ್ತುದು-ಪ್ರೀತಿಸಿತು, ಎನ್ನಿಪ್ಪಂತೆ-ಎನಿಸುವಂತೆ, ಲಜ್ಜೆಗೆ-ನಾಚಿಕೆಗೆ, ಒಡಲ್-ದೇಹ, ಮುಂಮುಟಿ+ಪೋ(ವೋ)ಪುದು-ರೂಪಳಿದ ಸಾವುಂಟಾಗುವುದು (ಮಣ್ಮುಟಿ) ಇನ್(ನ್ನು) ಇದರ್ಕೆ(ಕ್ಕೆ), ಏಗೆಯ್ವಂ-ಏನುಮಾಡುವುದು ?

ಎಲೌ ಗೆಳತಿ, ನಮ್ಮ ಇನಿಯನಾದ ಚಂಡಶಾಸನನು ಇತರರು ತನ್ನನ್ನು ನೋಡಿ ನಗುವರೆಂಬುದಕ್ಕೂ ನಾಚದೆ, ಇಷ್ಟುದಿನವೂ ಅವನನ್ನು ಪ್ರೀತಿಸಿದ ನಮ್ಮನ್ನು ಒಲ್ಲದೆ ಪರರ ಹೆಣ್ಣಿಗೆ ಮನಸ್ಸನ್ನು ತೆತ್ತು ತಾನು ಯಾರನ್ನು ಪ್ರೀತಿಸಿದ್ದನೊ ಅವಳು ಸಾಯಲಾಗಿ ತಾನೂ ಪ್ರಾಣವನ್ನು ತೆರುತ್ತಾನೆ. ಅಕ್ಕ, ನೋಡು, ಮಲ್ಲಿಗೆ ಮಾವನ್ನು ಒಲಿದರೆ ಮಾವು ವಸಂತ ಲಕ್ಷ್ಮಿಯನ್ನು ಒಲಿದಂತಾಯಿತು ಎಂಬಂತಾಯಿತು. ನಾಚಿಕೆಯಿಂದ ದೇಹ ವಿಕಾರವಾಗಿ ಸಾವುಂಟಾಗುತ್ತದೆ. ಇದಕ್ಕೆ ಏನುಮಾಡುವುದು ?

೭೫. ಪೞಿಗೆ-ನಿಂದಿಗೆ, ಏವಯ್ಸುವ ಅಸಮಾಧಾನಪಡುವ, ಪೆಱವೆಣ್ಗೆ-ಪರಸ್ತ್ರೀಗೆ, ಆಟಿಪ್ಪುದು-ಬಯಸುವುದು, ಪಾಪವೆಂಬ, ಆಮ್ನಾಯದ-ವೇದದ (ಜೈನಧರ್ಮಗ್ರಂಥ) ಒಂದು, ಅೞಿವೆಂಬ-ನಾಶವೆಂಬ, ಓಜೆಯ-ಕ್ರಮದ, ಎಂದರೆ ಈ ಕ್ರಮವನ್ನು ಪರಿಪಾಲಿಸಬೇಕಾದ, ಅಧೀಶವೃತ್ತಿಯ ರಾಜ್ಯಾಧಿಕಾರವನ್ನು ನಡೆಸುವ, ಅಧಿಪಂಗೆ-ದೊರೆಯಾದ ಚಂಡಶಾಸನನಿಗೆ, ಏನಾದುದು ಯಾವಗತಿಯುಂಟಾಯಿತು ? ಇಲ್ಲಿ-ಈ ಸಂದರ್ಭದಲ್ಲಿ, ಮೆಯ್-ನಮ್ಮದೇಹಗಳು, ನೆೞಲಂತೆ+ಅಪ್ಪುದು-ನೆಳಲು ದೇಹವನ್ನು ಅನುಸರಿಸುವಂತೆ ದೊರೆಯನ್ನು ಅನುಸರಿಸುವುದು, ನಮ್ಮ ವಿತ್ತ-ನಮ್ಮಪಾಲಿಗೆ ಬಂದ ಧನ, ನಮಗೆ ಇನ್ನು ಆ ಮಾತು ಅದೇಕೆ ಎಂದು, ಅಂತಃಪುರ(ದ), ಸ್ತ್ರೀಜನಂ-ಹೆಂಗಸರು, ಪಿಂದುೞಿವ-ದೊರೆಯು ಸತ್ತಮೇಲೆ ಬದುಕುವ, ಒಂದು ಆಸೆಯನ್(ನ್ನು), ಒಲ್ಲದೆ, ನೆರಪಿತ್ತು-ಸೇರಿತು.

ನಿಂದೆಗೆ ಅಸಮಾಧಾನಪಡುವ, ಪರರ ಹೆಣ್ಣಿಗೆ ಆಸೆಪಡುವುದು ಪಾಪವೆನ್ನುವ, ಹಾಗೆ ಮಾಡುವುದರಿಂದ ವೇದಮಾರ್ಗಕ್ಕೆ ಕಳಂಕವುಂಟಾಗುವುದೆನ್ನುವ ಕ್ರಮವನ್ನು ಪಾಲಿಸಬೇಕಾದ ದೊರೆಗೇ ಈ ಗತಿಗಾಯಿತು. ನೆಳಲು ದೇಹವನ್ನು ಅನುಸರಿಸುವಂತೆ ದೊರೆಯನ್ನು ಅನುಸರಿಸುವುದೇ ನಮ್ಮ ಧರ್ಮ. ಎಂದು ಕೊಂಡು ದೊರೆ ಸತ್ತಮೇಲೆ ಬದುಕುವ ಆಸೆಯನ್ನು ತೊರೆದು ಅಂತಃಪುರದ ಸ್ತ್ರೀ ಜನರು ಒಟ್ಟಾಗಿ ಸೇರಿದರು.

ವಚನ|| ಆ ಮಾತಂ–ಆ ಮಾತನ್ನು, ಮಾರ್ಕೊಂಡು-ಪ್ರತಿಭಟಿಸಿ, ಕುಲವತಿಯುಂ-ಒಳ್ಳೆಯ ಕುಲದಲ್ಲಿ ಹುಟ್ಟಿದವಳೂ, ಶೀಲವತಿಯುಂ ಉತ್ತಮವಾದ ನಡತೆಯುಳ್ಳವಳೂ ಎನಿಸದ, ಒರ್ವೊಳ್-ಒಬ್ಬ, ವಿದಗ್ಧೆ-ಚೆನ್ನಾಗಿ ತಿಳಿದವಳು, ಇಂತೆಂದಳ್-ಈ ರೀತಿ ನುಡಿದಳು.

೭೬. ಕ್ರಮದಿಂ-ಕ್ರಮವಾಗಿ, ಈ ಹರಿಣಿಯುಂ-ಈ ಜಿಂಕೆಯುನ್ನು, ಕೈಯೆಡೆಗೊಟ್ಟೆನು–ನಿನ್ನ ಕೈಯಲ್ಲಿ ಇಟ್ಟೆನು. ಈ ರಾಜಕೀರಮನ್-ಈ ಅರಗಿಳಿಯನ್ನು, ಕೊಂಡು ಸ್ವೀಕರಿಸಿ, ಆಡಿಸು. ಈ ಕಳಹಂಸನಂ-ಈ ರಾಜಹಂಸವನ್ನು, ನೀನ್-ನೀನು, ಓವು–ಪ್ರೀತಿಸು. ಈ ಸೋಗೆಗಾಗಿ-ಸೋಗೆ ನವಿಲಿಗಾಗಿ, ನಮಗೆ-ನಮಗಾಗಿ, ಎಲ್ಲಮಂ-ಈ ಎಲ್ಲ ಪ್ರಾಣಿಗಳನ್ನು, ಸಲಹು-ಕಾಪಾಡು. ಇವು, ಇನ್ನೆಮ್ಮ ಸಮಾನಂ-ನಮಗೆ ಸಮಾನವಾದುವು, ಎಂದು-ಹೀಗೆಂದು, ಕೆಲದ-ಪಕ್ಕದ, ಆಳೀಜಾಲಮಂ–ಸಖೀ ಜನರನ್ನು, ತಳ್ತ-ಮುಚ್ಚಿದ, ಎಮೆಯಿಂದಂ-ರೆಪ್ಪೆಯಿಂದ ಕೂಡಿ, ಕಣ್ಣೀರ್ಗಳಂ-ಕಣ್ಣೀರನ್ನು, ಕರೆಗಣ್ಮಿ-ಮಿತಿಮೀರಿ, ಸೂಸಿ, ಅಲ್ಲದೆ ಅವರನ್ನು, ಕೈಯೊಡ್ಡಿ ಬೇಡಿಕೊಂಡು ಕಱೆದರ್ (ರು)

ಅಂತಃಪುರದ ಸ್ತ್ರೀಯರು ಪಕ್ಕದಲ್ಲಿದ್ದ ಸಖೀಜನರನ್ನು ನೋಡಿ, "ಕ್ರಮವಾಗಿ ಈ ಜಿಂಕೆಯುನ್ನು ನಿನಗೆ ಒಪ್ಪಿಸಿದೆ. ಈ ಅರಗಿಳಿಯನ್ನು ಕೊಂಡು ಆಡಿಸು. ಈ ಕಳಹಂಸವನ್ನು ಪ್ರೀತಿಸು ಈ ಸೋಗೆ ನವಿಲನ್ನು ಕಾಪಾಡು. ಇವೆಲ್ಲ ನಮ್ಮ ಸಮಾನವೆಂದು ತಿಳಿಯಿರಿ. ಎಂದು ಕೈಯೊಡ್ಡಿ ಬೇಡಿಕೊಂಡು, ಕಣ್ಣನ್ನು ಮುಚ್ಚಿ ಅತಿಶಯವಾಗಿ ನೀರನ್ನು ಕರೆದರು.

ವಚನ || ಅಂತು–ಆ ರೀತಿಯಲ್ಲಿ, ನಿರಂತರ-ಎಡೆಬಿಡದ, ಶೋಕರಸದ, ಆವೇಗದೊಳ್-ಭರದಲ್ಲಿ-

೭೭. ಲೆಂಕತಂಡಂ-ಸೇವಕರ ಸಮೂಹ, ನೆರೆದುದು-ಸೇರಿತು. ರಾಣಿಯವಾಸಂ-ಅಂತಃಪುರದ ಸ್ತ್ರೀಯರು, ಒಡವಂದುದು ಒಡನೆ ಬಂದಿತು. ಧರಾಧಿಪತಿ ಚಂಡಶಾಸನನು, ಒಲ್ದಳಂ-ತಾನು ಪ್ರೀತಿಸಿದ ಸುನಂದೆಯನ್ನು, ತರಿಸಿದಂ-ತರಿಸಿದನು. ತನೂದರಿಯು- ಸುನಂದೆಯು, ವಿಶೇಷ(ವಾಗಿ), ಭೂಷಿತ-ಅಲಂಕೃತವಾದ, ಶರೀರಂ–ದೇಹ, ಓಲಗಸಾ

(ಶಾ)ಲೆಗೆವಂ(ಬಂ)ದದು. ಅನೇಕ ವಿಮಾನಗಳ, ಯಾನಂ–ವಾಹನ, ಉಬ್ಬರಿಸಿದುದು-ಅತಿಶಯುವಾಯಿತು. ಇಂತು-ಈ ರೀತಿಯಲ್ಲಿ, ಪುರಂ-ಆ ಪಟ್ಟಣವು, ಕರುಣ, ಅದ್ಭುತ, ರೌದ್ರ ರಸಗಳಿಗೆ, ಆಕರಂ–ಮನೆಯಾಗಿ, ಆದುದು-ಆಯಿತು.

ಸೇವಕರ ಸಮೂಹ ನೆರೆಯಿತು. ಜೊತೆಯಲ್ಲಿಯೇ ಅಂತಃಪುರ ಸ್ತ್ರೀಯರು ಬಂದರು. ಚಂಡಶಾಸನನು ತಾನು ಒಲಿದ ಸುನಂದೆಯ ದೇಹವನ್ನು ತರಿಸಿದನು. ವಿಶೇಷವಾದ ಅಲಂಕಾರದಿಂದ ಅಲಂಕೃತವಾದ ಅವಳ ದೇಹ ಓಲಗ ಶಾಲೆಗೆ ಬಂದಿತು. ವಿಮಾನಯಾನಗಳು ಅತಿಶಯುವಾದವು. ಹೆಚ್ಚೇನು ? ಆ ಪಟ್ಟಣ ಕರುಣ, ಅದ್ಭುತ, ರೌದ್ರರಸಗಳಿಗೆ ಆಕರವಾಯಿತು.

ವಚನ || ಅನ್ನೆಗಂ-ಅಷ್ಟರಲ್ಲಿಯೇ, ಇತ್ತಲ್-ಈ ಕಡೆ–

೭೮. ವಸುಷೇಣನ್-ವಸುಷೇಣನು, ಮೊಗಸಿ-ಮುತ್ತಿ, ಇಭವ್ರಾತಮಂ-ಆನೆಗಳ ಸಮೂಹವನ್ನು, ದುರ್ಗಕ್ಕೆ-ಕೋಟೆಗೆ, ಪೊಗಿಸಿ-ನುಗ್ಗಿಸಿ, ವಾಹವ್ಯೂಹಮಂ-ಕುದುರೆಯ ಸಮೂಹವನ್ನು, ಪಲ್ಲಣಿಸಿ-ಜೀನುಹಾಕಿಸಿ, ಪಣ್ಣಿಸಿ-ಸಿದ್ಧಮಾಡಿ, ಸುಭಟರಂ-ಶತ್ರುಗಳನ್ನು, ಕೈದುಕೊಳ್ವಂತಿರೆ, ಆಯುಧವನ್ನು ಹಿಡಿಯುವಂತೆ, ಆಲೋಚಿಸಿ-ಆಲೋಚನೆಮಾಡಿ, ರಾಜಾವಾಸದಿಂ-ಅರಮನೆಯಿಂದ, ತಾಂ-ತಾನು, ಪೊರಮಡುತ-ಹೊರಕ್ಕೆ ಹೊರಡುತ್ತ, ಕೋಟೆಯೊಳ್-ಕೋಟೆಯಲ್ಲಿ, ಇದೇಂ(ನು), ಕಾಮಿನೀ-ಸ್ತ್ರೀಯರ, ಹಾಗೂ ವೀರರ, ಸಮೂಹದ, ಉದ್ರೇಕ ಉದ್ರೇಕಗೊಂಡ-ಶೋಕಾಕುಲ-ಶೋಕದಿಂದ ಕೂಡಿದ, ಬಹಳರವಂ-ಅತಿಶಯುವಾದ ಶಬ್ದವು, ಆಗಳ್-ಆಗ, ತಿಣ್ಣಮಾಯ್ತು-ಹೆಚ್ಚಾಯಿತು, ಎಂದಂ(ನು).

ವಸುಷೇಣನು ಕೋಟೆಯ ಮೇಲೆ ಲಗ್ಗೆಮಾಡಲು ದುರ್ಗವನ್ನು ಮುತ್ತಿ, ಆನೆಯ ಸಮೂಹವನ್ನು ಸಿದ್ಧಗೊಳಿಸಿ, ಕುದುರೆಯ ಸಮೂಹಕ್ಕೆ ಜೀನುಹಾಕಿಸಿ, ವೀರರು ಆಯುಧವನ್ನು ಕೊಳ್ಳುವಂತೆ ಆಲೋಚಿಸಿ, ಅರಮನೆಯಿಂದ ತಾನು ಹೊರಹೊರಡುತ್ತ, "ಇದೇನು, ಈಗ ಕೋಟೆಯಲ್ಲಿ ಸ್ತ್ರೀಯರ ಮತ್ತು ವೀರರ ಶೋಕದ ಅತಿಶಯುವಾದ ಶಬ್ದ ಕೇಳಿಬರುತ್ತಿದೆ" ಎಂದನು.

೭೯. ಒರ್ವನ್-ಒಬ್ಬ, ಚರನ್-ಸೇವಕನು, ಐತಂದು-ಬಂದು, ಆವೃತ್ತಕಮಂ- ಆ ಸಮಾಚಾರವನ್ನು, ಉಸಿರ್ದೊಡೆ-ಹೇಳಲಾಗಿ, ಉರ್ವೀಶ್ವರಂ-ದೊರೆಯಾದ ವಸುಷೇಣನು, ಪ್ರಾಣನಾಥಾ-ಪ್ರಾಣ ಪ್ರಿಯಳಾದ ಸುನಂದೆಯ, ಮರಣ-ಸಾವಿನ, ಉದಂತ-ಸಮಾಚಾರದ, ಅಭ್ರ-ಮೋಡದ, ವಹ್ನಿ-ಬೆಂಕಿಯಿಂದ ಎಂದರೆ ಸಿಡಿಲಿನಿಂದ, ಸ್ಫುಟಿತ-ಸುಡಲ್ಪಟ್ಟ, ಹೃದಯ-ಮನಸ್ಸುಳ್ಳವನು ಆಗಿ, ಚ್ಛ್ವಾಸ ನಿಶ್ವಾಸ-ಉಸಿರಾಟದಿಂದ. ಮುಗ್ಧಾಂತರಿತಂ-ಮೂಢವಾದ ಮನಸ್ಸುಳ್ಳ ವನೂ, ಬಾಷ್ಪಾಂಬು-ಕಣ್ಣೀರಿನಿಂದ, ನಿಷ್ಪಂದಿತ-ಚಲಿಸದ, ನಯನ ಯುಗಂ-ಎರಡು ಕಣ್ಣುಳ್ಳವನೂ, ಆಗಿ, ಖೇದದಿಂ-ಸಂಕಟದಿಂದ, ಕೀಲಿ ಸಿರ್ದರ್-ಕಟ್ಟಿದರು, ಕರುವಿಟ್ಟರ್-ಎರಕಹೊಯ್ದರು, ತಿರ್ದುವಿಟ್ಟರ್-ತಿದ್ದಿದರು, ಬರೆದು, ಕರಿಯ ಮೇಲಿಟ್ಟರ್-ಆನೆಯ ಮೇಲಿಟ್ಟರು, ಎಂಬ ತೆರೆ-ಎನ್ನುವಹಾಗೆ, ಇರ್ದನ್-ಇದ್ದನು.

ಒಬ್ಬ ಸೇವಕನು ಬಂದು ಕೋಟೆಯ ವರ್ತಮಾನವನ್ನು ಹೇಳಿದನು. ಪ್ರಾಣಪ್ರಿಯೆ ಆದ ಸುನಂದೆಯ ಸಾವಿನ ಸಮಾಚಾರದ ಬೆಂಕಿ ಇವನ ಹೃದಯವನ್ನು ಸುಟ್ಟಿತು. ಉಚ್ಛ್ವಾಸ ನಿಚ್ಛ್ವಾಸಗಳು ನಿಂತು ಹೋದವೊ ಎಂಬಂತಾದನು. ಅವನ ಕಣ್ಣುಗಳು ನೀರಿನಿಂದ ತುಂಬಿದವು. ಎರಕಹೊಯ್ದರೊ, ತಿದ್ದಿದರೊ, ಬರೆದು ಆನೆಯ ಮೇಲಿಟ್ಟರೊ ಎನ್ನುವಂತೆ ವಸುಷೇಣನು ಕಾಣಿಸಿದನು.

ವಚನ || ಅಂತು-ಹಾಗೆ, ಕಿರಿದು ಬೇಗ-ಸ್ವಲ್ಪಹೊತ್ತು, ಇರ್ದು-(ದ್ದು), ಎಂತಾನುಂ-ಯಾವುದೊ ರೀತಿಯಲ್ಲಿ, ತನ್ನತಾನಱಿದು-ತನ್ನ ನಿಜಸ್ವರೂಪವನ್ನು ತಿಳಿದು, ಬಾಯುಟಿದು-ಹಂಬಲಿಸಿ, ಆಕಾಶ ವಚನನ್-ಬಯಲಿನಲ್ಲಿ ಮಾತನಾಡುವ ವಸುಷೇಣನು, ಇಂತು+ಎಂದಂ-ಈ ರೀತಿ ಹೇಳಿದನು.

೮೦. ವಸುಷೇಣನು ಸುನಂದೆಗಾಗಿ ಹಂಬಲಿಸುತ್ತಾನೆ.

ಆನ್-ನಾನು, ಅಱಿದೆನ್+ಎಂದು ಸತ್ತೆನೆಂದು, ಚಂಡಶಾಸನನು, ಪುಸಿದೊಡೆ-ಸುಳ್ಳಾಡಲಾಗಿ, ನೀಂ-ನೀನು, ಕಱಿದೆ-ಸತ್ತುಹೋದೆ. ಆದರೆ ನಿನ್ನ ಸಾವನೆ-ಸಾವನ್ನು, ಕಂಡು, ಇಂತು-ಈ ರೀತಿಯಲ್ಲಿ, ಆನ್-

ನಾನು, ಉೞಿದೆಂ-ಬದುಕಿದೆ, ಎನ್ನಿಂದಂ-ನನಗಿಂತಲೂ, ನಿರ್ಲಜ್ಜರ್-ನಾಚಿಕೆಯಿಲ್ಲದವರೂ, ದೀನರ್-ದೀನರೂ, ಕೃಪಣರಾದವರೂ, ಕೃತಘ್ನರ್-ಮಾಡಿದ ಉಪಕಾರವನ್ನು ನೆನೆಸದವರೂ, ಆರ್-ಯಾರಿದ್ದಾರೆ?

ನಾನು ಸತ್ತನೆಂದು ಚಂಡಶಾಸನನು ಹೇಳಿದ ಸುಳ್ಳನ್ನು ನಂಬಿ ನೀನು ನನಗಾಗಿ ಪ್ರಾಣ ಬಿಟ್ಟೆ. ಆದರೆ ನಾನಾದರೋ ನಿನ್ನ ಸಾವನ್ನು ಕಂಡು ಈ ರೀತಿಯಲ್ಲಿ ಇನ್ನೂ ಬದುಕಿದ್ದೇನೆ. ನನಗಿಂತಲೂ ನಾಚಿಕೆಯಿಲ್ಲದವರೂ ದೀನರೂ ಕೃಪಣರೂ ಇನ್ನಾರಿದ್ದಾರೆ?

ವಚನ || ಅನಂತರ-ಆಬಳಿಕ, ಪಾರ್ಷ್ಣಿಗ್ರಾಹಕನಾಗಿ-ಬೆನ್ನನ್ನು ಹಿಡಿದುಕೊಂಡಿದ್ದ, ದಯಿತಸಾಮಂತನೊಳ್-ಪ್ರಿಯ ಸಾಮಂತನಲ್ಲಿ, ಇಂತು-ಎಂದಂ-ಈ ರೀತಿ ನುಡಿದನು.

೮೧. ಇನಿಯಳ್-ಪ್ರಿಯಳು, ಪೋದಬೞಿಕ್ಕೆ-ಸತ್ತುಹೋದಮೇಲೆ, ಎನ್ನ+ಇರವು-ನನ್ನಬಾಳು, ತಾರಾಮಂಡಲಂ-ಕಣ್ಣಿನ ಮಧ್ಯದ ಬೊಂಬೆ, ಪೋ(ಹೋ)ದ, ಲೋಚನಂ-ಕಣ್ಣು, ಇರ್ಪಂತೆ-ಇರುವ ಹಾಗೆ, ಸುಗಂಧ ಪೋದ-ವಾಸನೆಯಿಲ್ಲದ, ಕೞಿವೂ ಇರ್ಪಂತೆ-ಬಾಡಿದ ಹೂ ಇರುವಂತೆ, ತೀವಿದ-ತುಂಬಿದ, ಜೀವನಮೆಲ್ಲಂ-ನೀರೆಲ್ಲವೂ, ಪೋದ-ಚೆನ್ನಾಗಿ ಹೋದ, ಹೊಟ್ಟುಗೆಱೆ-ಬಾಡಿದಕೆಱೆ, ತಾನಿರ್ಪಂತೆ-ತಾನು ಇರುವ ಹಾಗೆ, ದೈನ್ಯಕ್ಕೆ, ಭಾಜನಂ-ಗುರಿಯಾಗಿ, ಇರ್ದೆಂ-ಇದ್ದೇನು? ಅಸು-ಪ್ರಾಣ ಪೋ(ಹೋ)ದ, ಬಾೞ್ವೆನಂ-ಬದುಕಿರುವ ಹೆಣನಾಗಿದ್ದಾನೆ. ಇದರ್ಕೆ-ಈ ಸೌಭಾಗ್ಯಕ್ಕೆ, ಆಂ-ನಾನು, ಇರ್ದೊಡೇಂ-ಇದ್ದರೇನಾಯಿತು, ಬಿೞ್ದೊಡೇಂ-ಬಿದ್ದರೇನಾಯಿತು.

ನನ್ನ ಪ್ರಿಯೆ ಹೋದ ಬಳಿಕ ನನ್ನ ಇರುವಿಕೆ ಗೊಂಬೆಹೋದ ಕಣ್ಣಿನಂತೆ, ಪರಿಮಳವು ಹೋದ ಬಾಡಿದ ಹೂವಿನಂತೆ, ತುಂಬಿದ ನೀರು ಹೋದ ಕೆರೆಯಂತೆ, ದೈನ್ಯಕ್ಕೆ ಗುರಿಯಾಗಿದ್ದೇನೆ. ಪ್ರಾಣವಿಲ್ಲದೆ ಬಾಳುವ ಹೆಣ. ನಾನು ಇದ್ದರೇನು ಬಿದ್ದರೇನು?

ವಚನ || ಅಂತು ಮಲ್ಲದೆಯುಂ-ಇದಲ್ಲದೆ,

೮೨. ರಾಜ್ಯದಲ್ಲಿ ಬಾಳುವುದು ನನಗೆ ಬೇಕಿಲ್ಲ.

ಇದಱೊಳ್-ಈ ಸಂದರ್ಭದಲ್ಲಿ, ವಲ್ಲಭೆ-ಹೆಂಡತಿಯಾದವಳನ್ನು,

ಕಾದಿ-ಯುದ್ಧಮಾಡಿಯಾದರೂ, ಕೊಳ್ವ-ತೆಗೆದುಕೊಳ್ಳತಕ್ಕ, ಧನಂ-ಐಶ್ವರ್ಯ. ಆ ಪ್ರಾಣೇಶ್ವರೀರತ್ನಂ-ನನ್ನ ಪ್ರಾಣೇಶ್ವರಿಯಾದ ಸ್ತ್ರೀರತ್ನವು, ಇಲ್ಲದ, ಬಾಳ್+ಕೋಟೆ-ಈ ಕತ್ತಿ ಮತ್ತು ಕೋಟೆಗಳು, ಏಕೆ-ಗಡ? ಕೋಟಲೆಗಳ್-ತೊಂದರೆಗಳು, ಏಟಲ್-ಕಾಣಿಸಿಕೊಳ್ಳಲು, ಶತ್ರುಸಾಯಲ್(ಲು), ತಾಂ-ತಾನು, ಕಡಂಗಿದಪಂಗಡ-ಉತ್ಸಾಹಗೊಳ್ಳುತ್ತಿರುವನಲ್ಲವೆ? ಆರನ್-ಇನ್ನಾರನ್ನು, ಕೊಲ್ಲ್ವುದು-ಕೊಲ್ಲತಕ್ಕದ್ದು? ಅಕಟ, ಈ ಬೇಳಂಬಂ-ವ್ಯರ್ಥವಾದ ಪ್ರಯತ್ನವು, ಇನ್ನೇಕೆ, ಸಾಯದೊಡಂ-ಸಾಯದಿರಲು, ತೀರದೆ-ಸಾಧ್ಯವೆ? ಕಾಯಮಂ-ದೇಹವನ್ನು, ತೊಱೆಯಲ್-ಬಿಟ್ಟುಬಿಡಲು, ಇನ್ನುಂ-ಇನ್ನು ಮುಂದೆಯೂ, ರಾಜ್ಯದೊಳ್(ದಲ್ಲಿ), ಬಾಳ್ವುದೇಂ-ಬದುಕತಕ್ಕದ್ದೇನು?

ಪ್ರಾಣಪ್ರಿಯೆ ಯುದ್ಧಮಾಡಿಯಾದರೂ ರಕ್ಷಿಸಿಕೊಳ್ಳತಕ್ಕ ಧನ. ಆ ಸ್ತ್ರೀರತ್ನವಿಲ್ಲದಿದ್ದಮೇಲೆ ಈ ಕತ್ತಿ ಕೋಟೆಗಳು ಏತಕ್ಕೆ? ಕೋಟಲೆಗಳು ನಮ್ಮನ್ನು ಸುತ್ತುವರಿದಿರುವಾಗ, ಶತ್ರುಸತ್ತಿರುವಾಗ ಈ ನಮ್ಮ ಉತ್ಸಾಹದಿಂದೇನು? ಇನ್ನು ಕೊಲ್ಲುವುದು ಯಾರನ್ನು? ನಮ್ಮ ಈ ವ್ಯರ್ಥವಾದ ಪ್ರಯತ್ನದಿಂದೇನು? ನಾವು ಸತ್ತೇ ತೀರಬೇಕಲ್ಲವೆ? ದೇಹವನ್ನು ತೊರೆಯ ಬೇಕಾಗಿರುವಾಗ ಈ ರಾಜ್ಯದಲ್ಲಿ ಬದುಕಿ ಏನು ಉಪಯೋಗ?

೮೩. ಮುನಿಸು-ಕೋಪ, ಅಯ್ದುಂತೆರದಿಂದಲಿ-ಐದು ವಿಧದಲ್ಲಿ, ಅಪ್ಪುದು-ಉಂಟಾಗುವುದು. ಅದಱೊಳ್-ಅದರಲ್ಲಿಯೂ, ಸ್ತ್ರೀಸಂಭವಂ-ಹೆಣ್ಣಿನಿಂದ ಉಂಟಾಗುವ ಕೋಪ, ತಿಣ್ಣಂ-ಅತಿಶಯವಾದುದು, ಆ ಮುನಿಸಂ-ಆ ಕೋಪವನ್ನು, ತಂದನ-ತಂದವನ, ಕಂಠಪೀಠತಳದೊಳ್ (ದಲ್ಲಿ), ತಂದಿಟ್ಟು, ರಕ್ತಾಂಬು-ರಕ್ತದಿಂದ, ಮಜ್ಜನಮಂ-ಸ್ನಾನವನ್ನು, ಮಾಡಿಸಿ, ಮಸ್ತಕಾಂಬುರುಹದಿಂದಂ-ತಲೆಯೆಂಬ ಕಮಲದಿಂದ, ಪೂಜೆಗೈದು-ಪೂಜೆಮಾಡಿ, ಅಂತೊಡೆ-ಪ್ರತಿಭಟಿಸಿದರೆ, ಆತನ-ಹಾಗೆ ಮಾಡಿದವನ, ಕರವಾಳ್-ಕರದಕತ್ತಿ, ಕೂರ್ವಾಳ್-ಹರಿತವಾದ ಕತ್ತಿ, ದಲ್-ಅಲ್ಲವೆ. ಇಲ್ಲವಾದರೆ, ಅದು, ಉಂತು-ವ್ಯರ್ಥವಾದ,

ಪಾಟೂರ್-ಹಾಳೂರಿನ, ವೈ್ಲಲಾರನಾ-ಕ್ಷುದ್ರದೇವತೆಯ ಕೈಯಲ್ಲಿರುವ, ಮರವಾಳ್-ಮರದ ಕತ್ತಿ.

ಮನುಷ್ಯನಿಗೆ ಐದು ವಿಧವಾಗಿ ಕೋಪಗಳು ಸಂಭವಿಸುತ್ತವೆ. ಅದರಲ್ಲಿಯೂ ಸ್ತ್ರೀಸಂಬಂಧವಾದ ಕೋಪ ಅತಿಶಯವಾದುದು. ಹಾಗೆ ಕೋಪವನ್ನು ತಂದವನ ಕಂಠಪೀಠತಳದಲ್ಲಿ ತರಿದಿಟ್ಟು ರಕ್ತ ದಿಂದ ಸ್ನಾನಮಾಡಿಸಿ ತಲೆಯೆಂಬ ಕಮಲದಿಂದ ಪೂಜೆಮಾಡಿ ಯಾರು ಶತ್ರುವನ್ನು ಪ್ರತಿಭಟಿಸುತ್ತಾರೋ ಅವನ ಕೈಯಲ್ಲಿರುವ ಕತ್ತಿ ಹರಿತ ವಾದ ಕತ್ತಿ ಎನಿಸಿಕೊಳ್ಳುತ್ತದೆ. ಹಾಗಲ್ಲದವನ ಕತ್ತಿ ಹಾಳೂರಿನ ಕ್ಷುದ್ರದೇವತೆಯ ಕೈಯಲ್ಲಿರುವ ಮರದ ಕತ್ತಿಯಂತೆ.

ವಚನ || ಎಂದು, ಕೊಕ್ಕರಿಸಿ-ಅಸಹ್ಯಪಟ್ಟು, ಮಾಣದೆ-ಸುಮ್ಮ ನಿರದೆ,

೮೪. ಏಱ-ಹತ್ತಿ, ಬರೆಗೊಂಡ-ಏಟುತಿಂದ, ಜೂದುಂಗಾಱನ ವೊಲ್-ಜೂಜುಗಾರನಂತೆ, ಲಗ್ಗೆ ಮಾಡಲ್ + ಒಲ್ಲದೆ-ದಾಳಿಮಾಡಲು ಇಷ್ಟಪಡದೆ, ಪಡೆಯಂ-ಸೈನ್ಯವನ್ನು, ಸಾಱಿಸಿ-ಹಿಂತಿರುಗುವಂತೆ ಮಾಡಿ, ಮುಂದುಂ-ಮುಂದುಗಡೆ, ಪಿಂಗುವ-ಹಿಮ್ಮೆಟ್ಟುವ, ನೀಱೆಯವೋಲ್-ಹೆಣ್ಣಿನಂತೆ, ವಸುಷೇಣಂ-ವಸುಷೇಣನು, ತೆಗೆಯವೇೞ್ದಂ-ಸೈನ್ಯವನ್ನು ತೆಗೆಯುವಂತೆ ಹೇಳಿದನು.

ಲಗ್ಗೆಮಾಡಲು ಹತ್ತಿ ಏಟುತಿಂದ ಜೂಜುಗಾರನಂತೆ ವಸುಷೇ ಣನು ಲಗ್ಗೆಮಾಡಲೊಲ್ಲದೆ, ಸೈನ್ಯಕ್ಕೆ ಸಾರಿಸಿ, ಹಿಮ್ಮೆಟ್ಟುವ ಹೆಣ್ಣಿನಂತೆ ಸೈನ್ಯವನ್ನು ಹಿಂತಿರುಗುವಂತೆ ಹೇಳಿದನು.

ವಚನ || ಅಂತು, ಪರವಿಗ್ರಹದ-ಶತ್ರುಗಳ ಮೇಲೆ ನಡಸುವ ಯುದ್ಧದ, ಮೇಲಣ-ಮೇಲಿನ, ತೋಳ್ವಲಮಂ-ತೋಳಿನ ಬಲವನ್ನು, ನಿಜವಿಗ್ರಹದ-ತನ್ನ ದೇಹದ, ಮೇಲಣ-ಮೇಲಿರುವ, ಬಾಳ್ವಲಮುಂ-ಕತ್ತಿಯ ಬಲವು, ಓಸರಿಸದೆ-ಸರಿಯದೆ, ಸುತ್ತಿಱಿದ-ಸುತ್ತು ಮುತ್ತಿದ, ಬೀಡಂ-ಬೀಡಾರವನ್ನು, ತೆಗೆಯಿಸಿ, ಮಗುಳ್ದು-ಹಿಂದಿರುಗಿ, ಬರ್ಪಾ ಗಳ್-ಬರುವಾಗ,

೮೫. ಬಿರುದಿನ, ಕಾಳೆ-ಕಹಳೆ, ಬಾರಿಸುವ, ಬೀ(ವೀ)ರದ,

ಡೌಡೆ, (ಒಂದು ವಾದ್ಯ ವಿಶೇಷ), ತೆರಳ್ವ-ಹೋಗತಕ್ಕ, ಕೇತನೋತ್ಕರದ-ಬಾವುಟಗಳ ಸಮೂಹದ, ವಿಡಂಬ-ಠೀವಿ, ಮೆಲ್ಲನುಲಿತಪ್ಪ-ನಿಧಾನವಾಗಿ ಚಲಿಸುವ, ಚತುರ್ಬಲದ-ಚತುರಂಗ ಬಲದ, ಉರ್ವು-ಉಬ್ಬುವಿಕೆ, ಕೂರ್ಪಿನಿಂದ-ಹರಿತದಿಂದ, ಉರಿವರಿವ-ಹೊಳೆಯುವ, ಅಸ್ತ್ರಶಸ್ತ್ರಗಳ, ಕಿರಣಂ ಕಾಂತಿ, ವಸುಷೇಣನೊಳ್(ನಲ್ಲಿ), ಐದೆ-ಚೆನ್ನಾಗಿ ಉಂಟಾದ, ಕೊಕ್ಕರಿಕೆಗೆ-ಅಸಹ್ಯತೆಗೆ, ದುಃಖಿತೇ-ದುಃಖಿಯಾದವನ, ಮನಸಿ-ಮನಸ್ಸಿನಲ್ಲಿ, ಸರ್ವಂ-ಎಲ್ಲವೂ, ಅಸಹ್ಯಂ-ಅಸಹ್ಯವಾಗುತ್ತವೆ, ಎಂಬ ನೀತಿಯಿಂ-ಎಂಬ ನೀತಿಯಿಂದ, ಆದುವು-ಉಂಟಾದವು.

ಬಾರಿಸುವ ವಾದ್ಯವಿಶೇಷಗಳು, ಚಲಿಸುವ ಬಾವುಟಗಳು, ಮೆಲ್ಲಗೆ ತೆರಳತಕ್ಕ ಚತುರಂಗ ಸೇನೆ, ಹರಿತವಾದ ಅಸ್ತ್ರಶಸ್ತ್ರಗಳ ಕಾಂತಿ ಇವೆಲ್ಲವೂ ಮೊದಲೇ ದುಃಖಿಯಾದ ವಸುಷೇಣನಿಗೆ ಅಸಹ್ಯವನ್ನುಂಟು ಮಾಡಿದುವು.

ವಚನ|| ಅಂತು-ಮೇಲೆ ಹೇಳಿದ ರೀತಿಯಲ್ಲಿ, ನಿರ್ವೇಗ ಪರನಾಗಿ-ವೈರಾಗ್ಯಪರನಾಗಿ, ಮಗುಳ್ದು ಬಂದು-ಹಿಂತಿರುಗಿ ಬಂದು, ಅಸ್ತಂಗತ ಪ್ರಭೆಯಂತೆ-ಮರೆಗೊಂಡ ಕಾಂತಿಯಂತೆ, ನಿಜಮಂಡಲಮಂ-ತನ್ನ ದೇಶವನ್ನು, ಪೊ(ಹೊ)ಕ್ಕು,

೮೭. ನಡುನಾಡ, ತೀರ್ಥಮೆನಿಸಲ್-ತೀರ್ಥವೆನಿಸುವ ಹೆಸರನ್ನು, ಪಡೆದು-ಹೊಂದಿ, ಇಂದ್ರಪ್ರಣಯುಮೆ(ವೆ)ಂಬ, ಪರ್ವತಕಟಕಂ+ಪಿ(ಬಿ)ಡಿದು-ಪರ್ವತ ಪ್ರಾಂತ್ಯವನ್ನು ಹೊಂದಿ, ನಿಜ ಕಟಕಮಂ-ತನ್ನ ಸೈನ್ಯವನ್ನು, ತಾಂ-ತಾನು, ಬಿಡಿಸಿ-ಬೀಡಾರ ಬಿಡಿಸಿ, ಮಗಂಗೆ-ತನ್ನ ಮಗನಿಗೆ, ಕೊಡೆಯುಮಂ ಶ್ವೇತಚ್ಛತ್ರವನ್ನೂ, ಪಟ್ಟಮುಮಂ-ಪಟ್ಟವನ್ನೂ ಇತ್ತು-ಕೊಟ್ಟು (ಈ-ಧಾ.),

೮೭. ಸಮಭಾಗಂ-ಸಮಭಾಗವಾಗಿ, ಬರೆ-ಬರಲು, ಹಸ್ತಿ-ಆನೆ, ವಾಜಿ-ಕುದುರೆ, ಸಹಿತಂ ಇವುಗಳೊಡನೆ, ಭಂಡಾರಮಂ-ಭಂಡಾರವನ್ನು, ಪಚ್ಚುಗೊಂಡು-ಹಂಚಿಕೆ ಮಾಡಿಕೊಂಡು (ಪಸು. ಧಾ.), ಮಗಂಗೆ-ಮಗನಿಗೆ, ಅರ್ಧಮನ್ ಇತ್ತು-ಅದರಲ್ಲಿ ಅರ್ಧಭಾಗವನ್ನು ಕೊಟ್ಟು, ಚೈತ್ಯ-ಬಸದಿಯ, ನಿವಹ-ಸಮೂಹದ, ಉದ್ಯಾನಕ್ಕೆ, ತಾಂ-ತಾನು,

ಧರ್ಮಮನ್-ಧರ್ಮವನ್ನು, ಉದ್ಯೋಗಿಸೆ-ಮಾಡಲು ಮೊದಲುಮಾಡಿ, ಸಂಯಮೋಪಕರಣಕ್ಕೆ-ಇಂದ್ರಿಯ ನಿಗ್ರಹ ಮಾಡಲು ಮತ್ತು, ಅರ್ಹತ್-ತೀರ್ಥಂಕರನ, ಪದ-ಕಾಲುಗಳ, ಅಭ್ಯರ್ಚನಕ್ಕೆ-ಪೂಜೆಗೆ, ಮನೋರಾಗದಿಂ-ಸ್ವಸಂತೋಷದಿಂದ, ಗಜ-ಆನೆ, ವಾಜಿ-ಕುದುರೆ, ಸ್ತ್ರೀ-ಹೆಂಗಸರ, ಸಮಾಜಂಗಳಂ-ಸಮೂಹಗಳನ್ನು, ಇತ್ತು-ಕೊಟ್ಟು,

೮೮. ಇವು, ಘಟಿಕಾಸ್ಥಾನಂ ಘಟಿಕಾಸ್ಥಾನ, ಮತ್ತೆ, ಇವು, ತೀರ್ಥಸ್ಥಾನಂ-ತೀರ್ಥಸ್ಥಾನ ಎಂಬ ರೂಢಿಯ, ಭಗವದ್ಭವನಕ್ಕೆ-ತೀರ್ಥಂಕರನ ದೇವಾಲಯಕ್ಕೆ, ಅಲಂಘ್ಯಂ-ದಾಟಲು ಅಸಾಧ್ಯವಾದ, ಅಟಲುಂ-ದುಃಖ, ತವೆ-ನಾಶವಾಗಲು, ಮುಕ್ಕೊಡೆಯೆತ್ತಿ, ಆ ವಸುಷೇಣಂ-ವಸುಷೇಣನು, ಬಿಟ್ಟಂ-ದತ್ತಿಯನ್ನು ಬಿಟ್ಟನು.

ಕುದುರೆ ಆನೆ ಸಹಿತ ಭಂಡಾರವನ್ನು ಹಂಚಿಕೊಂಡು, ಮಗನಿಗೆ ಅರ್ಧವನ್ನು ಕೊಟ್ಟು ಬಸದಿಯ ಉದ್ಯಾನಕ್ಕೆ ಬಂದು, ಧರ್ಮವನ್ನು ಮಾಡಲು ಉದ್ಯೋಗಿಸಿ, ಇಂದ್ರಿಯ ನಿಗ್ರಹ ಮಾಡಲು ಮತ್ತು ಅರ್ಹಂತನ ಪಾದವನ್ನು ಪೂಜಿಸಲು, ಆನೆ, ಕುದುರೆ, ಸ್ತ್ರೀಯರ ಸಮೂಹವನ್ನು ಕೊಟ್ಟು, ಇವು ಘಟಿಕಾಸ್ಥಾನ, ಇವು ತೀರ್ಥಸ್ಥಾನ ಎನ್ನುವ ತೀರ್ಥಂಕರ ದೇವಾಲಯಗಳಿಗೆ ದಾಟಲು ಅಶಕ್ಯವಾದ ದುಃಖ ನಾಶವಾಗಲು, ಮೂರು ಕೊಡೆಯೆತ್ತಿ ಆ ವಸುಷೇಣನು ದತ್ತಿ ಬಿಟ್ಟನು.

೮೯. ಲಲನಾ-ಹೆಂಡತಿಯ, ವಿಯೋಗ-ಅಗಲಿಕೆಯ, ಹೇತು-ಕಾರಣದ, ಛಲಂ-ಹಟ, ಎರ್ದೆಯೊಳ್-ಎದೆಯಲ್ಲಿ, ನಟ್ಟ-ನಟ್ಟಿರುವ, ಶೂಲದಂತಿರೆ, ಅದನ್ನು, ತಪದಿಂ-ತಪಸ್ಸಿನಿಂದ, ಗೆಲೆ-ಗೆಲ್ಲಲು, ತನು-ದೇಹ, ಜೀರ್ಣಂ+ಆಗೆ-ಜೀರ್ಣವಾಗಲು, ಕೂರಲಗಿನ-ಹರಿತವಾದ ಕತ್ತಿಯಿಂದ, ಪರಿದೊವಲೊಳ್-ಹರಿದ ತೊಗಲಿನಲ್ಲಿ, ಅಂತು, ಆ ಮುನಿಪಂ-ಆ ವಸುಷೇಣ ಮುನಿಯು, ಇರ್ದಂ-ಹಾಗೆ ಇದ್ದನು. (ಅಷ್ಟು ಕ್ರೂರವಾದ ತಪಸ್ಸನ್ನು ಮಾಡಿದನು ಎಂದು ಭಾವ)

ಸುನಂದೆಯ ಅಗಲಿಕೆಯ ಕಾರಣದ ಹಟ ವಸುಷೇಣನ ಎದೆಯಲ್ಲಿ ಶೂಲದಂತೆ ನಟ್ಟಿರಲು ಅದನ್ನು ತಪಸ್ಸಿನಿಂದ ಗೆದ್ದು, ದೇಹ ಜೀರ್ಣ

ವಾಗಲು ಹರಿತವಾದ ಕತ್ತಿಯಿಂದ ಹರಿದ ತೊಗಲಿನಲ್ಲಿ ಇದ್ದವನಂತೆ ಆ ಮುನಿಯು ಇದ್ದನು.

ವಚನ|| ಅಂತು-ಮೇಲೆ ಹೇಳಿದ ರೀತಿಯಲ್ಲಿ, ತಪಸ್ತಪ್ತ ಶರೀರನ್+ಆಗಿ–ತಪಸ್ಸಿನಿಂದ ಸಂತಾಪಗೊಂಡ ಶರೀರವುಳ್ಳವನಾಗಿ, ನಿಜ-ತನ್ನ, ಆಯುರವಸಾನದೊಳ್-ಆಯುಸ್ಸು ಕೊನೆಗೊಂಡಾಗ, ಒಂದು ತಿಂಗಳ್(ಳು)ವರಂ(ವರೆಗೂ), ಮರುಮಂಡಲದಂತಿರೆ-ನೀರು ನೆಳಲಿಲ್ಲದ ಸ್ಥಳದಂತೆ, ಅನಶನಕ್ಷೇತ್ರನಾಗಿ-ಆಹಾರವಿಲ್ಲದ ದೇಹವುಳ್ಳವ ನಾಗಿ, ನೋಂತು-ವ್ರತಮಾಡಿ, ತಪಸ್ಸನ್ನು ಆಚರಿಸಿ, ಕಡೆಯೊಳ್-ಕೊನೆ ಯಲ್ಲಿ, ಎ(ನ)ನ್ನ, ತಪದ, ಫಲಂ-ಫಲವು, ಉಂಟಪ್ಪೊಡೆ-ಉಂಟಾಗಿರು ವುದಾದರೆ, ಆನ್-ನಾನು, ಅನ್ಯಜನ್ಮದೊಳ್-ಬೇರೊಂದು ಹುಟ್ಟಿನಲ್ಲಾ ದರೂ, ಆರ್ಗಂ-ಯಾರಿಗೇ ಆಗಲೀ, ಅಜೇಯನುಂ=ಗೆಲ್ಲಲು ಅಸಾಧ್ಯ ನಾದವನೂ, ಅತಿಸುಭಗರೂಪಸೌಂದರ್ಯನುಂ-ಅತಿಶಯವಾದ ಕಾಂತಿ ಯಿಂದ ಕೂಡಿದ ರೂಪಸೌಂದರ್ಯಗಳುಳ್ಳವನೂ, ವಿಶೇಷ-ಸಮಸ್ತ ವಾದ, ಎಲ್ಲ, ಧರಾವಲ್ಲಭಜ್ಯಾಯನುಂ+ಆಗಿ–ಭೂರಮಣಿಗೆ ಗಂಡನಾಗಿ ಎಂದರೆ ಚಕ್ರವರ್ತಿಯಾಗಿ, ಪುಟ್ಟುವೆನಕ್ಕೆ-ಹುಟ್ಟುವವನಾಗುತ್ತೇನೆ, ಎಂದು, ನಿಶ್ಚಯಿಸಿ—

೯೦. ವಸುಷೇಣನು ದೇಹ ಬಿಟ್ಟನು.

ತೋಱು-ಪ್ರದರ್ಶಿಸಿ, ತೋರಿಸಿ, ನಟಿಯಿಸುವ, ಜೋಹಮನ್ (ಜೋಹ, ಯೋಗ-ಸಂ,) ವೇಷವನ್ನು, ಏಱಿಸಿ-ಹಾಕಿಕೊಂಡು, ಕೊಳದೆ+ಇರ್ದ–ಗ್ರಹಿಕೆಯಾಗದಿದ್ದ ಎಂದರೆ ಹಿಡಿಸದಿದ್ದ, ಜೋಹದ-ವೇಷದ, ಉದ್ದೆಸದಿಂದಂ-ಉದ್ದೇಶದಿಂದ, ಜಾಱಿಸುವಂತಿರೆ ಆ ವೇಷ ವನ್ನು ಹಿಂದಕ್ಕೆ ತೆಗೆದುಕೊಳ್ಳುವಹಾಗೆ, ತಪದಿಂ-ತಪಸ್ಸಿನಿಂದ, ತಾಱಿದ-ಬಾಡಿದ, ಬೆಂಡಾದ, ತನುವಂ-ದೇಹವನ್ನು, (ಅನುಪ್ರಾಸಾಲಂಕಾರ) ನಿಧಾನದಿಂ-ಮೆಲ್ಲಮೆಲ್ಲಗೆ, ಮುಂಬಿಟ್ಟಂ-ಮೊದಲೆ ಬಿಟ್ಟುಬಿಟ್ಟನು.

ಪ್ರದರ್ಶನಕ್ಕಾಗಿ ವೇಷವನ್ನು ಧರಿಸಿ, ಅದು ಜನರಿಗೆ ಗ್ರಹಿಕೆ ಯಾಗದಿರಲು, ಯಾವ ಉದ್ದೇಶಕ್ಕಾಗಿ ವೇಷವನ್ನು ಧರಿಸಿದನೋ

ಅದರಿಂದ ಜಾರಿಕೊಳ್ಳುವಂತೆ, ತಪಸ್ಸಿನಿಂದ ಬಾಡಿ ಬೆಂಡಾದ ದೇಹವನ್ನು ವಸುಷೇಣನು ನಿಧಾನವಾಗಿ ಬಿಟ್ಟು ಬಿಟ್ಟನು.

ವಚನ|| ಅಂತು-ಹಾಗೆ,ಮುಡುಪಿ-ಸತ್ತು,

೯೧. ಕಟ್ಟಿತನ್-ಕಟ್ಟಿದ್ದನ್ನು, ಎಂದರೆ ಮಾಡಿದ್ದನ್ನು, ಆರ್ಗಂ-ಯಾರಿಗೂ, ಕಳೆಯಲ್-ಪರಿಹರಿಸಿಕೊಳ್ಳಲು. ನೆಟ್ಟನೆ-ನೇರವಾಗಿ (ಭರ್ತಿಪದ), ಬಾರದವೊಲ್-ಬಾರದಿರುವಂತೆ, (ವಸುಷೇಣನು ಮಾಡಿದನು. ಅದರ ಫಲವನ್ನು ಅನುಭವಿಸಲೇಬೇಕು ಎಂದು ಭಾವ), ಅಂತು-ಆ ರೀತಿಯಲ್ಲಿ, ನೆಗಟ್ದ-ಮಾಡಿದ, ಉಗ್ರವಾದ, ತಪಂ-ತಪಸ್ಸು, ಕಟ್ಟಿದ-ಸಂಪಾದಿಸಿದ ಸಂಗ್ರಹಿಸಿದ (ಪುಣ್ಯಕಟ್ಟಿಕೊಂಡ ಎಂಬ ಮಾತನ್ನು ಗಮನಿಸಿ), ಪುಣ್ಯದ, ಫಳದಿಂ-ಫಲದಿಂದ, ವಸುಷೇಣನು, ಸಹಸ್ರಾರ ಕಲ್ಪ (ಒಂದುಸ್ವರ್ಗ)ದೊಳ್(ದಲ್ಲಿ), ಪು(ಹು)ಟ್ಟಿ, ಸುರನಾದಂ-ದೇವತೆಯಾದನು.

ಮಾಡಿದುದನ್ನು ಅನುಭವಿಸದೆ ತೀರದೆನ್ನುವಂತೆ, ವಸುಷೇಣನು ಆ ರೀತಿಯಾಗಿ ಆಚರಿಸಿದ ಉಗ್ರತಪಸ್ಸಿನ ಪರಿಣಾಮವಾಗಿ ಸಂಪಾದಿಸಿದ ಪುಣ್ಯದ ಫಲದಿಂದ ಸಹಸ್ರಾರ ಕಲ್ಪದಲ್ಲಿ ದೇವನಾಗಿಹುಟ್ಟಿದನು.

---

# ಅನುಬಂಧ

## ೧ ಕವಿಚರಿತ್ರೆ

ಕಾವ್ಯ ಪಾಠಕ್ಕೆ ಕವಿಯ ಪರಿಚಯವೂ ಒಂದು ಮುಖ್ಯವಾದ ಅಂಗ. ಏಕೆಂದರೆ ಕವಿ ಹುಟ್ಟಿ ಬೆಳೆದ ಸನ್ನಿವೇಶ, ಅವನು ಅಭ್ಯಾಸ ಮಾಡಿದ ಗ್ರಂಥಗಳು, ಅವನಿಗೆ ದೊರೆತ ರಾಜಾಶ್ರಯ, ಅವನ ಮೇಲೆ ತಮ್ಮ ಪ್ರಭಾವವನ್ನು ಬೀರಿದ ವ್ಯಕ್ತಿಗಳು ಇವೇ ಮೊದಲಾದ ಅಂಶಗಳನ್ನು ಗಮನಿಸಿದರೆ ಕಾವ್ಯದ ಸ್ವಾರಸ್ಯ ಇಮ್ಮಡಿಯಾಗುತ್ತದೆ. ನಮ್ಮವರು ಕವಿಚರಿತ್ರೆಯ ಬಾಹ್ಯಾಂಶಗಳಿಗೆ ಹೆಚ್ಚು ಗಮನವನ್ನು ಕೊಡುತ್ತಿರಲಿಲ್ಲವಾದ ಕಾರಣ ಕವಿ ಬರೆದ ಕಾವ್ಯಗಳು, ಶಾಸನಗಳು, ಇತರ ಕವಿಗಳ ಹೇಳಿಕೆ, ಐತಿಹ್ಯಗಳಿಂದ ಕವಿಚರಿತ್ರೆಯನ್ನು ಕಟ್ಟಲು ನಮ್ಮಲ್ಲಿ ತಕ್ಕ ಸಾಧನಗಳುಂಟು. ಈ ಕಾವ್ಯದ ಕರ್ತೃವಾದ ಜನ್ನನು ತನ್ನ ವಿಷಯವಾಗಿ ತನ್ನೆರಡು ಗ್ರಂಥಗಳಲ್ಲಿ ತಕ್ಕ ಮಟ್ಟಿಗೆ ಹೇಳಿಕೊಂಡಿದ್ದಾನೆ. ಯಶೋಧರ ಚರಿತೆಯಿಂದಲೂ, ಅನಂತನಾಥ ಪುರಾಣದಿಂದಲೂ ಕವಿಯ ವಿಷಯವಾಗಿ ದೊರೆಯುವ ಅಂಶಗಳನ್ನು ಇಲ್ಲಿ ಸಂಗ್ರಹಿಸಿದೆ.

ಜನ್ನನ ಕೃತಿಗಳು ಎರಡು. ಕ್ರಿ. ಶ. ೧೨೦೯ ರಲ್ಲಿ ಯಶೋಧರ ಚರಿತೆಯನ್ನೂ, ಕ್ರಿ. ಶ. ೧೨೩೦ ರಲ್ಲಿ ಅನಂತನಾಥ ಪುರಾಣವನ್ನೂ ಕವಿಯು ರಚಿಸಿದನು. ತರೀಕೆರೆ ಚನ್ನರಾಯ ಪಟ್ಟಣದ ಶಾಸನಗಳ ರಚಕನೂ ಜನ್ನನೇ. ಜೈನಮತದವನಾದ ಕವಿ ಕಮ್ಮೆ ವಂಶದ ಕಾಶ್ಯಪಗೋತ್ರದ ಒಂದು ಹಿರಿಯ ಮನೆತನದವನಾಗಿದ್ದನು. ಹೊಯ್ಸಳರ ದೊರೆಯಾದ ನಾರಸಿಂಹನ ಆಸ್ಥಾನಕವಿಯಾದ ಶಂಕರ (ಕವಿ ಸುಮನೋಬಾಣ)ನೇ ಇವನ ತಂದೆ. ಗಂಗಾದೇವಿ ತಾಯಿ; ಲಕುಮಾದೇವಿ ಹೆಂಡತಿ. ರಾಮಚಂದ್ರಮುನೀಂದ್ರರು ಜನ್ನನ ಗುರುಗಳು. ಹೊಯ್ಸಳರ ವೀರ ಬಲ್ಲಾಳನ, ಅವನ ಮಗ ನಾರಸಿಂಹನ ಆಸ್ಥಾನದಲ್ಲಿ ಜನ್ನನು ಕವಿಯೂ ಕಲಿಯೂ ಆಗಿದ್ದನು. ಕವಿಚಕ್ರವರ್ತಿ, ಕವಿ

ಭಾಳಲೋಚನ ಇವೇ ಮೊದಲಾದುವು ಕವಿಯ ಬಿರುದುಗಳು. ಜನ್ನನು ಪಂಪ, ರನ್ನ, ಪೊನ್ನ, ನಾಗಚಂದ್ರ ಇವರೇ ಮೊದಲಾದ ಪೂರ್ವ ಕವಿಗಳನ್ನು ಸ್ಮರಿಸಿದ್ದಾನೆ. ಹೆಚ್ಚೇನು? ಒಳ್ಳೆಯ ಮನೆತನ, ವಿದ್ವಾಂಸರ ಸಹವಾಸ, ಚಕ್ರವರ್ತಿಯ ಆಶ್ರಯ, ಎಲ್ಲಕ್ಕೂ ಮಿಗಿಲಾಗಿ ಆರೋಗ್ಯ ಭಾಗ್ಯಗಳನ್ನು ಪಡೆದ ಜನ್ನನು ಎಲ್ಲ ವಿಷಯಗಳಲ್ಲಿಯೂ ಸೌಭಾಗ್ಯಶಾಲಿ.

## ೨ ಕಥಾಸಾರಾಂಶ

ಭರತವರ್ಷದ ದಕ್ಷಿಣ ಭಾಗದಲ್ಲಿ ಸುರಮ್ಯವೆಂಬ ದೇಶದ ರಾಜಧಾನಿ ಪೌದನಪುರ. ಆದಿತೀರ್ಥಂಕರನ ಹಿರಿಯಮಗನಾದ ಭರತಚಕ್ರವರ್ತಿಯ ದರ್ಪವನ್ನು ಹುಡಿಗುಟ್ಟಿದ ಬಾಹುಬಲಿದೇವನು ಆಳಿದ ಪಟ್ಟಣ ಅದು. ಎಂದಮೇಲೆ ಅದರ ಹಿರಿಮೆಯನ್ನು ಏನೆಂದು ವರ್ಣಿಸುವುದು? ಈ ತೆರನಾದ ಮಹಿಮೆಯನ್ನು ಪಡೆದ ಆ ಪಟ್ಟಣದ ಅರಸು ವೀರನಾದ ವಸುಷೇಣ.

ವಸುಷೇಣನಿಗೆ ಪ್ರಾಪಂಚಿಕಸೌಖ್ಯದ ವಿಷಯದಲ್ಲಿ ಯಾವುದಕ್ಕೂ ಕೊರತೆಯಿರಲಿಲ್ಲ. ಊರ್ವಶಿ ರಂಭೆ ಮೇನಕೆ ತಿಲೋತ್ತಮೆ ಇವರೇ ಮೊದಲಾದ ಅಪ್ಸರಸ್ತ್ರೀಯರ ಹಾವಭಾವ ಹುಬ್ಬಿನ ಕೊಂಕು ಕಣ್ಣಿನ ಕಾಂತಿ ಕೆನ್ನೆಯ ಸೊಗಸು ಇವುಗಳನ್ನು ಮೀರಿಸಲು ಒಬ್ಬಳೇ ಸಾಕೆನ್ನುವ ಐನೂರು ಜನ ರಾಣಿಯರು ಅರಸನ ಅಂತಃಪುರವನ್ನು ಅಲಂಕರಿಸಿದ್ದರು. ಇವರಲ್ಲಿ ಸುನಂದೆ ರಾಜನ ಮನಸ್ಸನ್ನು ಸಂಪೂರ್ಣವಾಗಿ ಅಪಹರಿಸಿದ್ದಳು. ಶತ್ರುಗಳನ್ನು ಗೆದ್ದಿದ್ದ ವಸುಷೇಣನು ತನ್ನ ಕಾಲವನ್ನೆಲ್ಲ ಸಂಪೂರ್ಣವಾಗಿ ಸುನಂದೆಯಲ್ಲಿ ವಿನಿಯೋಗಿಸಿದನು. ಅವಳೊಡನೆ ಸುಖಸಂಕಥಾವಿನೋದದಲ್ಲಿ ಎಷ್ಟೋ ದಿನಗಳು ಉರುಳಿಹೋದವು.

ಒಂದು ದಿನ ವಸುಷೇಣನು ಕುದುರೆಯ ಏರಾಟದ ವಿನೋದದಲ್ಲಿದ್ದಾಗ, ಈ ಮೊದಲೆ ಪರಿಚಿತನಾಗಿದ್ದ ಸುದರ್ಶನನೆಂಬುವನು ದೊರೆಯನ್ನು ಕಾಣಿಸಿಗೊಂಡು ಕಾಣಿಕೆಕೊಟ್ಟು, ನಮಸ್ಕರಿಸಿ ಈ ರೀತಿ ನುಡಿದನು. 'ದೇವ, ನಿಮ್ಮ ಒಡಹುಟ್ಟಿದವನೂ, ಚಿಕ್ಕಂದು ನಿಮ್ಮೊಡನೆ

ಧೂಳಾಟವಾಡಿದವನೂ ಆದ ಮಕರಗ್ರಾಹಪಟ್ಟಣದ ದೊರೆ ಚಂಡಶಾಸನು ನಿಮ್ಮನ್ನು ನೋಡಲು ಬರುತ್ತಿದ್ದಾನೆ. ನಿಮ್ಮ ಸಮಯವನ್ನು ತಿಳಿದು ಬರಲು ನನ್ನನ್ನು ಅಟ್ಟಿದನು.' ಸುದರ್ಶನನ ಮಾತನ್ನು ಕೇಳಿ ಚಂಡಶಾಸನನನ್ನು ಕುರಿತ ಪ್ರೀತಿ ವಸುಷೇಣನಲ್ಲಿ ಮೂಡಿತು. ಅವನ ಕಣ್ಣುಗಳು ಅರಳಿದವು. 'ಈಗಳೇ ನಿಮ್ಮ ಅರಸರನ್ನು ಬರಹೇಳು' ಎಂದು ಅಪ್ಪಣೆಮಾಡಿ ತನ್ನ ನರ್ಮಸಚಿವನನ್ನು ಅವನನ್ನು ಕರೆತರಲು ಸುದರ್ಶನನೊಡನೆ ಕಳುಹಿಸಿಕೊಟ್ಟು ಇತ್ತ ಅವನ ಸ್ವಾಗತಕ್ಕೆ ನಿಂತನು.

ಅತ್ತ ಚಂಡಶಾಸನನು ತನ್ನ ಸ್ನೇಹಿತನಾದ ವಸುಷೇಣನನ್ನು ನೋಡಲು ಮಹಾ ವೈಭವದಿಂದ ಬಂದನು. ಅವನು ಬಂದ ಸಂಭ್ರಮವನ್ನು ಏನೆಂದು ವರ್ಣಿಸುವುದು? ಭೂಭಾಗವೆಲ್ಲ ಭಟರ ಪಾದಗಳ, ಕುದುರೆಯ ಗೊರಸುಗಳ ಚಿಸ್ಥೆಯಿಂದ ತುಂಬಿ ಹೋಯಿತು. ದಿಕ್ಕುಗಳು ಅವರು ಧರಿಸಿದ್ದ ಅಲಂಕಾರಗಳ ಕಿರಣಗಳಿಂದಲೂ ಕಸ್ತೂರಿಯ ಸುವಾಸನೆಯಿಂದಲೂ ಮುಚ್ಚಿಹೋಯಿತು. ಚಾಮರ ಬಾವುಟ ಬೆಳ್ಗೊಡೆಗಳ ಸಮೂಹದಿಂದ ಆಕಾಶ ಕವಿದುಹೋಯಿತು. ಬಹು ದಿನಗಳಾದ ಮೇಲೆ ಸಂಧಿಸಿದ ಗೆಳೆಯರಿಬ್ಬರು ಒಬ್ಬರನ್ನೊಬ್ಬರು ಅಪ್ಪಿಕೊಂಡರು ; ಕುಶಲಪ್ರಶ್ನೆಗಳಾದವು. ಸಂಭಾಷಣೆ ಮರ್ಯಾದೆಗಳು ನಡೆದಮೇಲೆ ವಸುಷೇಣನು ಚಂಡಶಾಸನನನ್ನು ತನ್ನ ಪಟ್ಟದಾನೆಯ ಮೇಲೆ ಕೂಡಿಸಿ, ತಾನೊಂದು ಭದ್ರಗಜವನ್ನೇರಿ ಮೆರವಣಿಗೆಯಲ್ಲಿ ಬಂದನು. ಚಂಡಶಾಸನನನ್ನು ಸ್ವಾಗತಿಸಲು ಪೌದನಪುರವನ್ನು ಸಿಂಗರಿಸಿದ್ದರು. ಹೆಣ್ಣುಗಳು ಹಾಡನ್ನು ಹಾಡುತ್ತಿದ್ದರು. ಪುರಜನರು ದೊರೆಯ ಗೆಳೆಯನನ್ನು ಕುತೂಹಲದಿಂದ ನೋಡಿ ತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಿದ್ದರು. ಇತ್ತ ವಸುಷೇಣನು ಮಿತ್ರನಾದ ಚಂಡಶಾಸನನೊಡನೆ ಮನೆಯನ್ನು ಹೊಕ್ಕು ಅವನನ್ನು ಔತಣದಿಂದ ತೃಪ್ತಿಗೊಳಿಸಿದನು. ತನ್ನ ಗೆಳೆಯನನ್ನು ಸುಖಗೊಳಿಸಲು ವಸುಷೇಣನು ಏರ್ಪಡಿಸಿದ ವಿನೋದಗಳಿಗೆ ಏನೂ ಕಡಿಮೆಯಿರಲಿಲ್ಲ. ಕಾವ್ಯವಿನೋದ ಗೋಷ್ಠಿ, ನಾಟಕಗಳ ಪ್ರದರ್ಶನ, ಗೀತಗಳ ಗಾಯನ, ನಾಟ್ಯ, ಮಲ್ಲ

ಕಾಳಗ, ಟಗರು ಕಾಳಗ, ಕುದುರೆಗಳ ಏರಾಟ, ಕಂದುಕ ಕ್ರೀಡೆ, ಗಜ ಯುದ್ಧ ಇವುಗಳಿಂದ ಕಾಲ ನೀರಿನಂತೆ ಕಳೆದುಹೋಯಿತು.

ಈ ನಡುವೆ ಚಂಡಶಾಸನನ ಮನಸ್ಸನ್ನು ಕಲಕುವ ಪ್ರಸಂಗ ವೊಂದು ಒದಗಿಬಂತು. ತುಂಬುಯೌವನದಿಂದ ಕೂಡಿದ ಸುನಂದೆ ಯನ್ನು ನೋಡಿದೊಡನೆಯೇ ಚಂಡಶಾಸನನ ಕಣ್ಣನ್ನು ಕಾಮನ ಕತ್ತಲೆ ಕವಿಯಿತು. ಮನಸ್ಸು ಅವಳಿಗಾಗಿ ಸೋತು ಪಾಪವನ್ನು ನೆನೆಯಿತು. ಕೆಳೆಯನಾದ ವಸುಷೇಣನ ಪಂಕ್ತಿಯಲ್ಲಿ ಚಂಡಶಾಸನನು ಕುಳಿತಿದ್ದಾಗ ವಿಲಾಸದಿಂದ ಬಡಿಸುತ್ತಿದ್ದ ಆ ಯುವತಿಯ ತೋಳ ಮೂಲದ ಕಾಂತಿ, ಮಣಿಬಂಧದ ಚೆಲುವಿಕೆ, ಕೋಮಲವಾದ ಬೆರಳು ಗಳ ಕೊಂಕು ಇವೆಲ್ಲ ಅವನ ಕಣ್ಣುಗಳಿಗೆ ಕೌತುಕವನ್ನುಂಟುಮಾಡಿ ಮನಸ್ಸಿಗೆ ಭ್ರಮೆಯನ್ನು ಹಿಡಿಸಿದವು. ಸುನಂದೆಯ ಚೆಲುವನ್ನು ನೋಡುತ್ತ ಆ ಕಾಮುಕನು ಬಾಯಲ್ಲಿಡುವ ತುತ್ತನ್ನು ಹಣೆಯಲ್ಲಿಟ್ಟು ಕೊಂಡು ಅವಳನ್ನುಹೊಗಳಲು ಯತ್ನಿಸಿದನು. ನೋಟದಲ್ಲಿ ಅವಳನ್ನು ಕುಡಿದನು. ಅವಳ ಇನಿವಾತನ್ನು ಕೇಳಿ ಕಿವಿ ತೃಪ್ತಿಗೊಂಡಿತು. ಅವಳು ಸುಳಿಯುತ್ತಿದ್ದಾಗ ಅವಳ ಮೈಮುಡಿಗಳಿಂದ ಬೀಸಿದ ತಂಗಾ ಳಿಯನ್ನು ಮೂಗು ಸವಿಯಿತು. ಅವಳು ಕೈಯಿಂದ ಬಡಿಸಿದ ಅನ್ನ ವನ್ನುಂಡ ನಾಲಗೆ ಆದರ ಸವಿಯನ್ನು ಅನುಭವಿಸಿತು. ಆದರೆ ಅವ ಳನ್ನು ಕೂಡುವ ಭಾಗ್ಯವನ್ನು ಪಡೆಯದೆ ಅಂಗಗಳನ್ನು ಕಾಮಜ್ವರ ಆವ ರಿಸಿತು. ಯಾವ ಉಪಚಾರದಿಂದಲೂ ಅದು ಶಮನವಾಗುವಂತೆ ತೋರಲಿಲ್ಲ.

ಚಂಡಶಾಸನನ ಕೆಳೆಯನಾದ ಸುದರ್ಶನನು ತನ್ನ ಒಡೆಯನ ಅವಸ್ಥೆಯನ್ನು ಅರಿತನು. ಸುನಂದೆ ಅವನನ್ನು ಸೋಲಿಸಿದುದನ್ನು ಅರಿತ ಅವನು ತಿಳಿಯದವನಂತೆ ಚಂಡಶಾಸನನನ್ನು ಕೇಳಿದನು. ಚಂಡ ಶಾಸನನು ಸುದರ್ಶನನಿಗೆ ಈರೀತಿ ಹೇಳಿದನು, 'ಮನಸ್ಸಿನಲ್ಲಿರುವುದನ್ನು ನುಡಿಯುವ ಹಾಗಿಲ್ಲ. ನುಡಿಯದಿದ್ದರೆ ಮನಸ್ಸಿಗೆ ಸಮಾಧಾನವಿಲ್ಲ. ಹಾಳು ಮನಸ್ಸು ಬೇರೊಂದು ಕಡೆ ಹರಿದಿದೆ. ಸಮೀಪಬಂಧುವಾದ ಈ ವಸುಷೇಣನ ಹೆಂಡತಿಯ ರೂಪು ನನ್ನನ್ನು ಸೋಲಿಸಿದೆ. ಮನಸ್ಸು

ಅವಳಲ್ಲಿ ಮೋಹಗೊಂಡಿದೆ. ಕಣ್ಣುನ್ನು ತಿರುಗಿಸಿ ಬಿಟ್ಟಂತೆ ಅವಳೊಬ್ಬ ಳನ್ನು ಬಿಟ್ಟು ಅವು ಬೇರಾವ ಪದಾರ್ಥವನ್ನು ಕಾಣುತ್ತಿಲ್ಲ. ಅಂಗಾಗಗ ಳಲ್ಲಿ ಹುಟ್ಟಿದ ಬೆಂಕಿ ನನ್ನನ್ನು ಸುಡುತ್ತಿದೆ. ದೇಹದಲ್ಲಿ ಪ್ರಾಣ ಉಳಿ ಯುವ ಉಪಾಯವನ್ನು ನಾನು ಕಾಣೆ. ಗೆಳೆಯ, ಬದುಕುವ ಉಪಾ ಯವನ್ನು ತೋರು. ಆ ಹೆಣ್ಣಿನ ಕಣ್ಣಿನ ಚುಂಬನ ನನ್ನ ಹೃದಯ ದಲ್ಲಿ ನಟ್ಟಿರುವ ಬಾಣವನ್ನು ಕಳೆಯುವುದೇ ? ಆ ತರುಣಿಯನ್ನು ಕೂಡುವ ಪುಣ್ಯ ನನಗೆ ಉಂಟಾಗದೇ ? ಅವಳ ಗಂಡನಿದ್ದರೆ ಏನಾ ಯಿತು ?"

ಚಂಡಶಾಸನನು ಕೆಳೆಯನೊಡನೆ ತನ್ನ ಮನಸ್ಸನ್ನು ಬಿಚ್ಚಿ ತನಗಾದ ದುಃಖವನ್ನು ತೋಡಿಕೊಂಡನು. ಹರಿಯುವ ಮನಸ್ಸನ್ನು ಕಟ್ಟಲು ಹಗ್ಗವಿಲ್ಲ. ನೋಡುವ ಕಣ್ಣುಗಳು ಸ್ಥಳಾಸ್ಥಳಗಳನ್ನು ವಿವೇಚನೆ ಮಾಡವು. ಪರಸ್ತ್ರೀಗೆ ಅವಳ ಗಂಡನ ರಕ್ಷಣೆಯಿದೆ ; ಬಂಧು ಗಳೂ ಆಪ್ತರೂ ಕಾಮುಕನಿಗೆ ನೀನು ಮಾಡುವ ಕಾರ್ಯ ಅಕಾರ್ಯ ವೆಂದು ಉಪದೇಶಿಸುತ್ತಾರೆ ; ನೀನು ಮನಸ್ಸನ್ನು ಕೊಟ್ಟರೂ ಹೆರರ ಹೆಣ್ಣು ನಿನ್ನನ್ನು ಕಣ್ಣೆತ್ತಿನೋಡಳು ; ಅವಳನ್ನು ಪಡೆಯುವುದು ನಿನಗೆ ಅಸಾಧ್ಯ ; ಅವಳು ನಿನ್ನನ್ನು ಒಲ್ಲಳು ; ನಿನಗೆ ಪರಾಂಗನೆಯ ಸಹವಾಸ ಸಲ್ಲದು ಎಂದು ಯಾರೆಷ್ಟು ಹೇಳಿದರೂ ಕಾಮುಕರು ತಲೆಹೋದರೂ ಹೆರರ ಹೆಣ್ಣಿಗೆ ಬಸಿದು ಬೀಳುತ್ತಾರೆ. ಹೀಗೆಂದುಕೊಂಡರೂ ಸುದರ್ಶ ನನು ತನ್ನ ಒಡೆಯನಿಗೆ ಬುದ್ಧಿಹೇಳಲಿಲ್ಲ. ಅದಕ್ಕೆ ಪ್ರತಿಯಾಗಿ ಸುದರ್ಶನನು ಚಂಡಶಾಸನನ ಪಾಪಬುದ್ಧಿಯನ್ನು ಪ್ರಚೋದಿಸಿದನು. ವಿರಹವ್ಯಥೆಯಿಂದ ಸಂಕಟಪಡುತ್ತಿದ್ದ ಚಂಡಶಾಸನನಿಗೆ ಈ ರೀತಿ ಹೇಳಿದನು. " ಈಗಾದರೂ ಏನಾಯಿತು ? ಆ ಸುನಂದೆಯಲ್ಲಿ ನಮ್ಮ ಬಯಕೆ ಕೈಗೂಡಲು ಅವಕಾಶವುಂಟು. ಆಕೆ ನನ್ನನ್ನು ತುಂಬ ವಿನಯ ದಿಂದ ಈರೀತಿ ಕೇಳಿದಳು. ' ನಿಮ್ಮ ದೊರೆ ಇಲ್ಲಿಗೆ ಯಾವ ಕಾರಣಕ್ಕಾಗಿ ಬಂದಿದ್ದಾರೆ ? ಅವರಿಗೆ ಇಲ್ಲಿರುವ ಕಾರ್ಯವೇನು ? ಅವರ ಪ್ರಯಾಣದ ದಿನ ಎಂದು ?' ಹೀಗೆ ಆಕೆ ತನ್ನನ್ನು ಹೆತ್ತ ತಂದೆಯ ಮಿತ್ರನಿಗೆ, ಒಡ ಹುಟ್ಟಿದ ಅಣ್ಣನಿಗೆ ಸಹಾಯಕನಾಗಿ ಬಂದವನಿಗೆ ಮಾತನಾಡುವಂತೆ

ಮಾತನಾಡಿದಳು. ಇದೇನು ನಿನ್ನಲ್ಲಿ ಅವಳಿಗಿರುವ ಆಸೆಯೋ ಇಲ್ಲವೆ ನಿರ್ವಾಹವೋ ನೀನೇ ಯೋಚಿಸಿ ನೋಡು". ಸುದರ್ಶನನ ಮಾತನ್ನು ಚಂಡಶಾಸನನು ಒಮ್ಮೆಗೇ ಮನ್ನಿಸಲಿಲ್ಲ. ಅವಳಾಡಿದ ಮಾತನ್ನೂ ಮಾಡಿದ ಉಪಚಾರವನ್ನೂ ಪ್ರೇಮವೆಂದು ಹೇಗೆ ತಾನೆ ಭಾವಿಸತಕ್ಕದ್ದು ? ಸುದರ್ಶನನು ತನ್ನ ದೊರೆಯನ್ನು ಮತ್ತೆ ಮಾತಿನಿಂದ ಮರುಳುಗೊಳಿಸಿದನು. 'ಆ ಹೆಣ್ಣು ತನ್ನ ಗಂಡನಿರುವಂತೆ ನಿನ್ನನ್ನು ಪ್ರೀತಿಸಳು. ತನ್ನ ಪ್ರಿಯನ ಸಂಪರ್ಕವನ್ನು ಮಾಡಿದ ಅವಳಿಗೆ ನಿನ್ನ ಗಂಡಗಾಡಿ ರುಚಿಸುವುದಿಲ್ಲವೆಂದು ಯೋಚಿಸಬೇಡ. ಗೆಳೆಯನೆ, ನೀನು ಪ್ರೀತಿಯನ್ನು ತೋರಿಸಿದರೆ ಅದನ್ನು ನಿರಾಕರಿಸುವ 'ಜೋಡೆ' ಯರಿದ್ದಾರೆಯೇ ? ಹಾಗೆ ನಿರಾಕರಿಸಿದಲ್ಲಿ ಕಾಮನ ತೋಳಿನಲ್ಲಿರುವ ರತಿ ಶಂಭುಕುಮಾರನನ್ನು ಲಲ್ಲೆಗೆಯ್ವಂತಾಗುತ್ತದೆ. ಅಲ್ಲದೆ ಈ ದಿನ ನೀನೂ ವಸುಷೇಣನೂ ಊಟಮಾಡಿ ಗಂಧವನ್ನು ಸ್ವೀಕರಿಸುತ್ತ ಹಂಸತಲ್ಪತುಲೀಕದಲ್ಲಿ ಪರಸ್ಪರ ಮಾತನಾಡುತ್ತಿದ್ದಾಗ ನನ್ನ ಕಣ್ಣುಗಳಿಗೆ ಸುನಂದೆಯನ್ನು ನೋಡುವ ಅವಕಾಶವಾಯಿತು. ಆಗ ಸುನಂದೆ ತನ್ನ ಮನಸ್ಸನ್ನು ನಿಮ್ಮ ಮುಂದೆ ತೆರೆದಿಟ್ಟಳು. ಮನಸೆಳೆಯುವ ಮಾತುಗಳನ್ನಾಡಿದಳು. ನವೆಯೂದಂತೆ ಅಪ್ಪುಗೆಯ ಇಂಪನ್ನೂ, ಮುತ್ತಿನ ಸುಖವನ್ನೂ, ನಿಮ್ಮ ಅಂಗದೊಡನೆ ಅವಳ ಅಂಗ ಸೇರುವ ರೀತಿಯನ್ನೂ ಮೇಲೆ ಬಿದ್ದು ಮಾಡುವ ತೆರದಲ್ಲಿ ಹೊಸಹೊಸ ಭಾವಗಳಿಂದ ಆ ಕಾಮಿನಿ ನಿಮ್ಮನ್ನು ನೋಡಿದಳು. ನೀವು ಅದನ್ನು ನೋಡಲಿಲ್ಲ.'

ಮರುಳಿಗೆ ಧೂಪ ಹಾಕುವಂತೆ ಸುದರ್ಶನನು ಚಂಡಶಾಸನನಿಗೆ ಮತ್ತೆ ನುಡಿದನು: "ಸ್ವಾಮಿ, ನೀನು ಮತ್ತು ವಸುಷೇಣನು ಊಟ ಮಾಡಿ ಹಂಸತಲ್ಪತುಲೀಕದಲ್ಲಿ ಮಾತನಾಡುತ್ತಾ ಕುಳಿತಿದ್ದಾಗ ನನ್ನ ಹಿಂದೆ ಕುಳಿತಿದ್ದ ನನಗೆ ಸುನಂದೆಯನ್ನು ನೋಡುವ ಅವಕಾಶವುಂಟಾಯಿತು. ಆ ಸಮಯದಲ್ಲಿ ಆಕೆ ನಾನಾವಿಧವಾದ ಭಾವಗಳನ್ನು ಪ್ರದರ್ಶನ ಮಾಡಿದಳು. ಅವು ಗಂಡನ ನೆಪದಿಂದ ಮಾಡಿದಂತೆ ಇದ್ದರೂ ನಿನ್ನನ್ನು ಕುರಿತಾದುವೇ ? ನೀನು ಮಾತ್ರ ಅವುಗಳನ್ನು ನೋಡಲಿಲ್ಲ." ಸುದರ್ಶನನ ಮಾತಿನಿಂದ ಚಂಡಶಾಸನನ ವಿರಹ ವಿಕಾರ ಮಿತಿಮೀರಿತು.

ಅಲ್ಲದೆ ಸುನಂದೆಯನ್ನು ನಿನ್ನೊಡನೆ ಕೂಡಿಸುತ್ತೇನೆಂದು ಅವನು ಮಾತುಕೊಟ್ಟನು.

ಒಂದುದಿನ ವಸುಷೇಣನು ಸಾಕಿದ ಮೃಗಗಳ ಬೇಟೆಯನ್ನು ನೋಡಬಯಸಿ ಚಂಡಶಾಸನನೊಡನೆ ಹೊರಟನು. ಅವನೊಡನೆ ಆನೆ, ಕುದುರೆ, ರಥ, ಕಾಲಾಳು, ಸ್ತ್ರೀಸಮೂಹ ರಾಜಪುತ್ರರ ಗುಂಪು ಇವುಗಳು ಹೊರಟವು. ಹಾಗೆ ಹೊರಟು ಬರುತ್ತ ಕಾಡ ನಡುವೆ ಮಾವಿನ ಮರದ ಮಧ್ಯದಲ್ಲಿ ಹೊಡೆದುಕೊಳ್ಳುತ್ತಿರುವ ಎದೆ, ಬಿಟ್ಟ ಬಾಯಿ, ಅರಳುತ್ತಿರುವ ಮೂಗು, ಅಂಟಿಕೊಂಡುಗೋಣು, ಗುಂಡಾದ ದೃಷ್ಟಿ, ಚಲಿಸುತ್ತಿರುವ ದೇಹ, ಎತ್ತಿದ ಕತ್ತು, ಜೋತಾಡುವ ಕಿವಿ, ಇವುಗಳಿಂದ ಕೂಡಿ ವೈಮರಿತ ಜಿಂಕೆಯೊಂದನ್ನು ಚಂಡಶಾಸನನು ನೋಡಿದನು. ಆ ಜಿಂಕೆಯನ್ನು ನೋಡುತ್ತಲೇ ಚಂಡಶಾಸನನು ತನ್ನ ಮನಸ್ಸಿನಲ್ಲಿ, "ಸುನಂದೆ ಬೇಟೆಯ ಮೃಗವನ್ನು ಸೆಳೆಯಲು ಇಟ್ಟಿರುವ ಪ್ರಾಣಿ; ನಾನು ಜಿಂಕೆ. ಈ ದೊಡ್ಡ ಕಾಡೇ ಬೇಟೆಯ ಪ್ರದೇಶ, ಮನ್ಮಥನೇ ಬೇಡ. ಅವನ ಹೂ ಬಾಣವೇ ನನ್ನ ಕೊಲ್ಲಲು ಒಡ್ಡಿರುವ ಹರಿತವಾದ ಬಾಣ. ನನ್ನ ಈ ವಿರಹಾವಸ್ಥೆ ಗೋರಿಗೆ ಸಮ" ಎಂದು ಯೋಚಿಸಿದನು. ಸ್ವಲ್ಪಹೊತ್ತು ಬೇಟೆ ನಡೆಯಿತು. ಅದನ್ನು ನೋಡಿ ವಸುಷೇಣನು ಸಂತೋಷಪಟ್ಟನು. ಆ ಬಳಿಕ ಆ ಉದ್ಯಾನವನಕ್ಕೆ ಸುನಂದೆಯೊಡನೆ ಭೋಜನವನ್ನು ತರುವಂತೆ ದೂತರಿಗೆ ಅಪ್ಪಣೆ ಮಾಡಿದನು. ಆ ಬಳಿಕ ಬೇಟೆಯ ವಿನೋದದಲ್ಲಿದ್ದ ಆ ಇಬ್ಬರ ರಥಗಳು ಬೇರೆಬೇರೆಯಾದುವು. ಚಂಡಶಾಸನನಾದರೊ ಸುನಂದೆ ಬರತಕ್ಕ ದಾರಿಯಲ್ಲಿಯೇ ಕಾದಿದ್ದು ಅವಳನ್ನು ಹಿಡಿದುಕೊಂಡನು. ಸುನಂದೆ ಚಂಡಶಾಸನನನ್ನು ಮಿತ್ರಘಾತುಕನೆಂದು ಅರಿದಿರಲಿಲ್ಲ. ಅವನು ತನ್ನನ್ನು ಹಿಡಿದೊಡನೆ ಆಕೆ ಹುಯ್ಯಲಿಟ್ಟಳು. "ನನ್ನ ಗಂಡನನ್ನು ವಂಚಿಸಿ ಚಂಡಶಾಸನನು ನನ್ನನ್ನು ಕದ್ದೊಯ್ಯುತ್ತಿದ್ದಾನೆ. ನಿಮ್ಮ ದೊರೆಯಾದ. ವಸುಷೇಣನ ಹೆಂಡತಿಯನ್ನು ಬಿಡಿಸಿ. ವೀರರಾದವರು ಇವರನ್ನು ಅಡ್ಡಕಟ್ಟಿ, ನನ್ನ ಈ ಗೋಳನ್ನು ನೀವು ವಸುಷೇಣನಿಗೆ ಮುಟ್ಟಿಸಿ. ಪರಸ್ತ್ರೀಯನ್ನು ಬಯಸಿ ಕದ್ದ ಹೇಡಿಯನ್ನು ಯಾರೂ ಕಾಣರಲ್ಲ! ಕೋಪದಿಂದ ಅವನನ್ನು ಕೊಲ್ಲರಲ್ಲ!

ಭೂಮಿ ಅವನನ್ನು ನುಂಗುವುದಿಲ್ಲವೆ? ದಿಗ್‌ದೇವಿಯರು ಇವನನ್ನು ಕಬಳಿಸರೆ? ಬೆಟ್ಟಗಳು ತಿನ್ನಬಾರದೆ? ಅಯ್ಯೋ, ನಾನು ಹಾಳಾದೆ. ಅನಾಥೆಯಾದೆ. ನನಗೆ ಇನ್ನಾರು ದಿಕ್ಕು? ನಿನಗೆ ವಸುಷೇಣನಲ್ಲಿ ಕೋಪವುಂಟಾದ ಪಕ್ಷದಲ್ಲಿ ಅವನೊಡನೆ ಪರಾಕ್ರಮದಿಂದ ಹೋರಾಡಬೇಕಾಗಿತ್ತು. ಹಾಗಲ್ಲದೆ ನೀನು ಅವನ ಹಿಂದೆ ಹೆಂಗಸಾದ ನನ್ನನ್ನು ಕದ್ದುಕೊಂಡು ಬರುವುದೆ? ಹಾಳು ಮನೆಯಲ್ಲಿದ್ದ ತುಪ್ಪದ ಪಾತ್ರೆಯನ್ನು ನಾಯಿ ಮುಟ್ಟುವಂತೆ ನೀನು ನನ್ನನ್ನು ಕದ್ದುತರುವುದು ಕ್ರಮವೆ? ಪರಸ್ತ್ರೀ ಮನಸ್ಸುಕೊಟ್ಟು ಮಾತನಾಡಿದಳು, ಪ್ರೀತಿದೋರಿದಳು ಎಂದರೂ ಶೂರರು ಅವಳಿಗೆ ಮನಸ್ಸನ್ನು ಕೊಡದಿರುವಾಗ ಎಳೆಯ ಮನಸ್ಸಿಗೆ ಈ ಕೆಟ್ಟ ಯೋಚನೆಯನ್ನು ಅಂಟಿಸುವೆಯಾ?"

ಸುರಮ್ಯದೇಶದ ಕಡೆಯ ಭಾಗವನ್ನು ರಕ್ಷಿಸಲು ಇಟ್ಟಿದ್ದ ಸಿಂಹಚೂಡನೆಂಬ ಸಾಮಂತನಿಗೆ ಸುನಂದೆಯ ಗೋಳು ಕೇಳಿಸಿತು. ಗರುಡಿಯಲ್ಲಿದ್ದ ಅವನು ಜಿಂಕೆಯನ್ನು ಕೊಂಡೊಯ್ವ ಹುಲಿಯಂತೆ ಸುನಂದೆಯನ್ನು ಹಿಡಿದುಕೊಂಡು ಹೋಗುತ್ತಿದ್ದ ಚಂಡಶಾಸನನನ್ನು ದೂರದಲ್ಲಿ ಕಂಡು ಗರ್ಜಿಸಿ, "ನನ್ನೊಡನೆ ಇದಿರಾಗು. ಪರಾಕ್ರಮನ್ನು ತೋರು. ರಥವನ್ನು ಇಳಿ. ಆಯುಧವನ್ನು ಧರಿಸು. ನನ್ನನ್ನು ಕಂಡು ಶೂರನಾದ ನೀನು ಬೆನ್ನು ತೋರಿಸುವರೇ? ನನ್ನನು ಎದುರಿಸಿನಿಂದ ವೀರರು ಮತ್ತೆ ಜೀವದೊಡನೆ ಹಿಂತಿರುಗುವುದಿಲ್ಲ" ಎಂದು ಮೂದಲಿಸುತ್ತ ಅವನನ್ನು ತರುಬಿದನು. ಆಗ ಚಂಡಶಾಸನನು ರಥವನ್ನು ನಿಲ್ಲಿಸಿ ಸಾರಥಿಯನ್ನು ಸುನಂದೆಯ ರಕ್ಷಣೆಗೆ ಇಟ್ಟು ರಥದಿಂದ ಭೂಮಿಗೆ ಇಳಿದು ಈ ರೀತಿ ನುಡಿದನು. "ಆನೆಯ ಕೈಯಲ್ಲಿದ್ದ ಕಬ್ಬನ್ನು ಕೋತಿ ಸೆಳೆಯಲು ಸಾಧ್ಯವೇ? ನಾನು ಹಿಡಿದವಳನ್ನು ನೀನು ಬಿಡಿಸುವೆಯಾ? ಸಾಯದೆ ಹೋಗು. ನಿನ್ನಿಂದ ನಿನ್ನ ಒಡೆಯನಿಗೆ ಗೋಳಾಟವೇಕೆ?" ಚಂಡಶಾಸನನ ಮಾತಿಗೆ ಸಿಂಹಚೂಡನು ನಕ್ಕು ಈ ರೀತಿ ಹೇಳಿದನು. "ವಸುಷೇಣನ ಮುಂದೆ ನಿನ್ನ ರಕ್ತ ಬಸಿಯುತ್ತಿರುವ ತಲೆಯನ್ನು ಸುನಂದಾದೇವಿ ಸಹಿತವಾಗಿ ಕಾಣಿಕೆಯಾಗಿ ಕೊಡುತ್ತೇನೆ. ಹಾಗಲ್ಲದೆ ಸಿಂಹಚೂಡನು ಹೋಗುತ್ತಾನೆಯೇ? ಪರಸ್ತ್ರೀಗೆ

ಬಯಸಿದವರನ್ನು ಭೂಮಿ ಹೊರುವುದೇ ? ಇವಳನ್ನು ನೀನು ಕದ್ದು ತಂದು ನಿನ್ನ ಒಳ್ಳೆಯ ಹೆಸರನ್ನು ನೀರಿನಲ್ಲದ್ದಿದೆ". ಆ ಮಾತಿಗೆ ಚಂಡ ಶಾಸನನು ಮತ್ತೆ ನುಡಿದನು. " ನೀನು ನನಗೆ ಬುದ್ಧಿ ಹೇಳುವಂತಾ ಯಿತೇ ? ನನ್ನಿಂದ ನೀನು ಬದುಕಿ ಹೋದಮೇಲೆ ನಿನ್ನ ಪರಾಕ್ರಮವನ್ನು ತೋರು. ಅದಕ್ಕಿಂತ ಮುಂಚೆ ಅದು ಸಲ್ಲದು" ಹೀಗೆ ಒಬ್ಬರನ್ನೊಬ್ಬರು ಮೂದಲಿಸುತ್ತ ಯುದ್ಧಕ್ಕೆ ಸಿದ್ಧರಾದರು. ಈ ಲೋಕದಲ್ಲಿ ಸಿಂಹಚೂಡನೊಬ್ಬನೇ ನಿಜವಾದ ಸ್ವಾಮಿ ಭಕ್ತ. ಚಂಡಶಾಸನನಾದರೊ ಕೃತಘ್ನ. ಇವರಿಬ್ಬರ ಸೋಲುಗೆಲವುಗಳು ದೊರೆಯ ಪುಣ್ಯವನ್ನು ಅವಲಂಬಿಸಿದೆ. ಆಗ ಸುನಂದೆಯು ತನ್ನ ಮನಸ್ಸಿನಲ್ಲಿಯೇ 'ಸೂರ್ಯದೇವ, ಭೂಮಿತಾಯಿ, ವಾಯುದೇವ, ಸುಭಟನಾದ ಈ ಸಿಂಹ ಚೂಡನ ತಲೆಯನ್ನು ಕಾಯಿ. ಈ ದ್ರೋಹವನ್ನು ಹೊಡೆದಿಕ್ಕು. ನಾನು ಚಂಡಶಾಸನನ ಈ ಸೆರೆಯಿಂದ ತಪ್ಪಿದಾಗ ನನ್ನನ್ನೇ ನಿಮಗೆ ಬಲಿಕೊಟ್ಟುಕೊಳ್ಳುತ್ತೇನೆ' ಎಂದು ಚಿಂತಿಸಿದುದಲ್ಲದೆ ಸಿಂಹಚೂಡನಿಗೇನಾಗುವುದೋ ಎಂದು ಔತ್ಸುಕ್ಯವನ್ನು ತಾಳಿದಳು. ಸಿಂಹಚೂಡನು ಸುನಂದೆಗೆ ಧೈರ್ಯಕೊಡುತ್ತ " ಸುಂದರಿ, ಈ ಹಗೆಯನ್ನು ಶತ್ರುವಿಗೆ ಒಪ್ಪಿಸಿ ಆ ಬಳಿಕ ನಿನ್ನನ್ನು ದೊರೆಗೆ ಒಪ್ಪಿಸುತ್ತೇನೆ" ಎಂದು ಹೇಳುತ್ತ ಚಂಡ ಶಾಸನನ್ನು ಆಕ್ರಮಿಸಿದನು. ಅವರಿಬ್ಬರಿಗೆ ನಡೆದ ಯುದ್ಧದಲ್ಲಿ ಸಿಂಹ ಚೂಡನು ತಲೆಯನ್ನು ಒಪ್ಪಿಸಬೇಕಾಯಿತು. ಅವನ ತಲೆಯನ್ನು ನೆಲಕ್ಕೆ ಬೀಳಿಸಿದೊಡನೆಯೇ ಚಂಡಶಾಸನನು ಗಾಳಿಗೆ ಗರಿಮೂಡಿದಂತೆ ಮುಹೂರ್ತ ಮಾತ್ರದಲ್ಲಿ ಕೋಟೆಯನ್ನು ಸೇರಿ ಸುನಂದೆಯನ್ನು ಅಲ್ಲಿ ಸೆರೆಯಿಟ್ಟನು.

ಇತ್ತ ಮಾವಿನ ತೋಪಿನಲ್ಲಿ ಸುನಂದೆ ಚಂಡಶಾಸನ ವಸುಷೇಣರಿಗಾಗಿ ಕಾಯುತ್ತಿದ್ದ ಅಧಿಕಾರಿಗಳು ಇವರಾರು ಬಾರದುದಕ್ಕೆ ಮನಸ್ಸಿನಲ್ಲಿಯೇ ತವಕಗೊಳ್ಳುತ್ತಿದ್ದರು. ಆ ವೇಳೆಗೆ ವಸುಷೇಣನು ಉದ್ಯಾನ ವನಕ್ಕೆ ಬಂದು "ಬಂದಳೆ ದೇವಿ ? ಪಂಕ್ತಿಗೆ ಎಡೆಮಾಡಿಸಿದಳೆ? ಚಂಡ ಶಾಸನ ಬಂದನೆ?" ಎಂದು ಆ ಜನರನ್ನು ಕೇಳುತ್ತಿರುವಾಗ ಬಿರಿಹೊಯ್ದ ಕೇಶಪಾಶವುಳ್ಳ, ಕಣ್ಣೀರು ಸುರಿಯುತ್ತಿದ್ದ, ಹೊಟ್ಟೆಯನ್ನು ಹೊಡೆದು

ಕೊಳ್ಳುತ್ತಿದ್ದ ಸಖಿ ಜನರು ಶೋಕರಸವೇ ರೂಪಗೊಂಡಂತೆ ಬಂದರು. ಇದನ್ನು ನೋಡಿದೊಡನೆಯೇ ವಸುಷೇಣನಿಗೆ ಆಶ್ಚರ್ಯವಾಯಿತು. ಅವರು ಅವನ ಬಳಿಗೆ ಬರುತ್ತಿದ್ದ ಸುನಂದೆಯನ್ನು ಚಂಡಶಾಸನನು ಸೆರೆ ಹಿಡಿದುಕೊಂಡು ಹೋದನೆಂದು ಹೇಳಿದರು. ಈ ಮಾತನ್ನು ಕೇಳಿ ದೊರೆಗೆ ಕೋಪವುಕ್ಕಿತು. ಜೊತೆಗೆ ಪ್ರಿಯ ಪತ್ನಿಯ ಅಗಲಿಕೆಯ ಶೋಕ ತೋರಿತು. ಪ್ರಿಯೆಯ ವಿರಹದಿಂದ ಅವನು ಮೂರ್ಛೆಗೊಂಡನು. ಹಾಗೆ ಮೂರ್ಛೆಗೊಂಡ ದೊರೆಯನ್ನು ಪರಿಜನರು ಶೈತ್ಯೋಪಚಾರ ಮಾಡಿ ಜೀವ ಬರುವಂತೆ ಮಾಡಿದರು. "ಕೊಬ್ಬಿದ ಶತ್ರು ಸಮೂಹ ವನ್ನು ನಿನ್ನ ತೋಳಿನಲ್ಲಿ ಹೊಳೆಯುವ ಖಡ್ಗದಿಂದ ಉಂಟಾದ ರಕ್ತದ ನದಿಯಲ್ಲಿ ಮುಳುಗುವಂತೆ ಮಾಡದೆ, ಕೋಪವೆಂಬ ಪ್ರತಾಪ ಬೆಂಕಿ ಯಿಂದ ಅವರ ಕೋಟೆಯನ್ನು ಸುಡದೆ, ವ್ಯರ್ಥವಾಗಿ ಹೇಡಿಯಂತೆ ಶೋಕ ಸಮುದ್ರದಲ್ಲಿ ಮುಳುಗಿರುವುದೇ ?" ಎಂದು ಅವನನ್ನು ಎಚ್ಚರಿಸಿದರು. ಅವರ ಮಾತಿಗೆ ದೊರೆ ಯುದ್ಧದಲ್ಲಿ ಸತ್ತು ಹೆಂಡಿರು, ಭಂಡಾರ ಹೋದರೆ ಅದು ವಿಧಿಯ ಬರಹ. ಅದು ಶೂರನಾದವನಿಗೆ ಸಂತಸ ವನ್ನೇ ತರುತ್ತದೆ. ಹಾಗಲ್ಲದೆ, ಹೆಂಡತಿ ಸೆರೆ ಸಿಕ್ಕಿರುವಾಗ ನಾನು ಮತ್ತೆ ಪಟ್ಟಣವನ್ನು ಪ್ರವೇಶಿಸುತ್ತೇನೆಯೇ. ಪ್ರಾಣಪ್ರಿಯಳಾದ ಸುನಂದೆ ಇಲ್ಲದೆ ನಾನು ಪ್ರಾಣವಿಲ್ಲದವನೇ. ಅವಳಿಲ್ಲದೆ ಹೇಗೆ ತಾನೆ ಊಟಮಾಡಲು ಸಾಧ್ಯ ? ಶತ್ರುಗಳ ಪ್ರಾಣವಾಯುವಿನಿಂದ ನನ್ನ ಕತ್ತಿಯೆಂಬ ಸರ್ಪವನ್ನು ತೃಪ್ತಿ ಪಡಿಸುತ್ತೇನೆ" ಎಂದು ಪ್ರತಿಜ್ಞೆ ಮಾಡಿ ದನು. ಆಗ ಅಲ್ಲಿ ಸೇರಿದ್ದ ಆಪ್ತರೂ, ಸಚಿವರೂ, ಸೇನಾಪತಿಗಳೂ ಇವರ ಇಂಗಿತವನ್ನು ಕಂಡು ದೊರೆ ಈ ರೀತಿ ಹೇಳಿದನು. "ಇನ್ನು ಈ ಸಂದರ್ಭದಲ್ಲಿ ಯಾರ ಮಾತನ್ನೂ ನಾನು ಕೇಳೆನು. ಮಾರಿ ಹೊಕ್ಕಿರತಕ್ಕ ಮನೆಯಲ್ಲಿ ಹಬ್ಬ ಮಾಡುವರೆ ? ಈ ವಿಷಯದಲ್ಲಿ ಆಲೋ ಚನೆ ಏತಕ್ಕೆ ? ನೀವು ಹೇಳುವುದೂ ಬೇಡ. ನಾನು ಕೇಳತಕ್ಕದ್ದೂ ಇಲ್ಲ." ಎಂದು ಯುದ್ಧಕ್ಕೆ ಸಿದ್ಧಪಡಿಸಿಕೊಂಡನು. ಅವನ ಚತುರಂಗ ಸೇನೆಯೆಲ್ಲ ಚಂಡಶಾಸನನ ಮೇಲೆ ಲಗ್ಗೆ ಮಾಡಲು ಸಿದ್ಧವಾಯಿತು.

ಚತುರಂಗ ಸೇನೆಯಿಂದ ಕೂಡಿ ವಸುಷೇಣನು ತನ್ನ ರಾಜ್ಯದ

ಗಡಿಯೂ, ಸಿಂಹಚೂಡನ ರಾಜಧಾನಿಯೂ ಆದ ಮಾಣಿಕ್ಯಪುರದ ಬಳಿ ಬರುವಾಗ ವಸುಷೇಣನಿಗೆ ವೀರಲಕ್ಷ್ಮಿ ಹೊತ್ತ ಚಿನ್ನದ ಕಲಶದಂತೆ ಹೊಳೆಯುತ್ತಿದ್ದ ಸಿಂಹಚೂಡನ ತಲೆ ಕಾಣಿಸಿತು. ವಕ್ರವೂ ಲೇಪನ ವನ್ನು ಒಳಗೊಂಡದ್ದೂ ಆದ ಗಡ್ಡ ಮೀಸೆ, ಮುಡಿಕಟ್ಟಿಗೆ ಕಟ್ಟಿದ ಕೆಂಪು ಬಟ್ಟೆ, ಕಸ್ತೂರಿಯನ್ನು ಲೇಪಿಸಿದ ಮೀಸೆ, ಹೊಳೆಯುವ ಹಲ್ಲು, ಕಚ್ಚಿದ ತುಟಿ, ಹೊಳೆಯುತ್ತಿದ್ದ ಹುಬ್ಬು, ಇವುಗಳಿಂದ ಕೂಡಿದ ಸಿಂಹ ಚೂಡನ ತಲೆ ಪರಿವೇಷದಿಂದ ಕೂಡಿ ಭೂಮಿಗೆ ಬಿದ್ದ ಸೂರ್ಯ ನಂತಿತ್ತು. ಅಷ್ಟೇ ಅಲ್ಲ; ಶತ್ರುವನ್ನು ಕಂಡು ಮನಸ್ಸಿನಲ್ಲಿ ಕೆಟ್ಟ ಆಸೆ ಯನ್ನು ಕಟ್ಟಿಕೊಂಡು ತಮ್ಮನ್ನು ಕಾಪಾಡಿದ ಸ್ವಾಮಿಗೆ ಸಂಕಟ ಹುಟ್ಟಿ ದಾಗ ಯುದ್ಧ ಭೂಮಿಯಿಂದ ಹಿಮ್ಮೆಟ್ಟಿ ಅದರ ಆಸ್ಥಾನದಲ್ಲಿ ಭುಜ ತಟ್ಟಿಕೊಳ್ಳುತ್ತಿದ್ದ ಸಾಮಂತರನ್ನು ಕೆದರಿದ ಗಡ್ಡದ ಸಿಂಹಚೂಡನ ತಲೆ ನಗುವಂತಿತ್ತು.

ಸಿಂಹಚೂಡನ ತಲೆಯನ್ನು ಹೊತ್ತು ತಂದು ಅದನ್ನು ವಸಷೇಣ ನಿಗೆ ನಿವಾಳಿಸಿ ಸುನಂದೆ ಅಪಹರಣಗೊಂಡ ಸಮಾಚಾರವನ್ನು ಹೇಳಿ ಆ ಬಳಿಕ ಹತ್ತಿರ ನಿಂತಿದ್ದವನು ಈ ರೀತಿ ನುಡಿದನು. "ನಾವು ಯುದ್ಧ ಮಾಡಿದರೂ ಮೋಸವಾಯಿತು. ಏಕೆಂದರೆ ಹಗೆ ಬದುಕಿ ಹೋದನೆಂದ ಮೇಲೆ ನಾವು ಆಡುವ ಮಾತು ವ್ಯರ್ಥ. ಇನ್ನು ಹೆಣ್ಣಿನ ವಿಷಯವನ್ನು ತೊರೆದು ಬಿಟ್ಟು ಶೂರರನ್ನೂ ಭಟರನ್ನೂ ಬಿಟ್ಟುಕೊಡು. ತಡವಾಗುತ್ತಿದೆ. ಅವರು ಸಿಂಹಚೂಡನನ್ನು ಸೇರಲಿ". ಸಿಂಹಚೂಡನ ತಲೆಯನ್ನು ನೋಡಿ ವಸುಷೇಣನಿಗೆ ದುಃಖ ಉಕ್ಕಿತು. ಆ ದುಃಖ ವನ್ನು ಅವನು ಹತೋಟಿಗೆ ತಂದುಕೊಳ್ಳುತ್ತಿದ್ದಾಗ ಸೂರ್ಯನು ಮುಳು ಗಿದನು.

ಆ ಸಮಯದಲ್ಲಿ ಇತ್ತ ಮಕರಗ್ರಾಹಪುರದಲ್ಲಿ ದೊಡ್ಡ ಕೋಲಾ ಹಲವೇ ಉಂಟಾಯಿತು. ಪೌರರು ದುರ್ಗಕ್ಕೆ ನಮ್ಮ ಅರಸನು ಪರರ ಹೆಣ್ಣನ್ನು ತರಲಿಲ್ಲ; ಅದಕ್ಕೆ ಪ್ರತಿಯಾಗಿ ಅವನ ಶುಭ್ರವಾದ ಕೀರ್ತಿ ಮಂಕಾಗುವಂತೆ ದೊಡ್ಡ ಮಾರಿಯನ್ನೇ ತಂದನು. ಸೇನೆಯಿಂದ ಕೂಡಿ ದವನೂ, ಶೂರನೂ ಹೆಂಡತಿಯ ಅಗಲಿಕೆಯಿಂದ ಸಂಕಟಗೊಂಡವನೂ

ಆದ ವಸುಷೇಣನು ಕಾಮುಕಿಚ್ಚು ದಾಳಿ ಇಟ್ಟ ಹಾಗೆ ಈ ದುರ್ಗವನ್ನು ಸುಟ್ಟು ಉರಿಸದೆ ಇರುವುದಿಲ್ಲ. ಈಗ ಮಾಡುವುದೇನು? ಆಗ ಹೇಗಿ ರಲು ಸಾಧ್ಯ? ಎತ್ತ ಹೋಗುವುದು ?" ಎಂದು ಅವರು ತಮ್ಮಲ್ಲಿಯೇ ಭಯದಿಂದಲೂ ಸಂಕಟದಿಂದಲೂ ಕುದ್ದುಕೊಂಡರು.

ಪೌರರ ಭಯ ನಿಜವಾಯಿತು. ಜನರನ್ನು ನುಂಗಲು ಭೂಮಿಯೇ ಬಾಯಿ ಬಿಟ್ಟಂತೆ ವಸುಷೇಣನು ಚಂಡಶಾಸನನ ದುರ್ಗಕ್ಕೆ ಲಗ್ಗೆ ನಡೆ ಸಲು ತಕ್ಕ ಸಾಮುಗ್ರಿಗಳನ್ನು ತೆಗೆದುಕೊಂಡು ಬಂದನು. ಅವನ ಕಡೆಯವರು ವಾದ್ಯಗಳನ್ನು ಪೂರೈಸಿ ಬೆಲ್ಲಕ್ಕೆ ಇರುವೆ ಮುತ್ತಿದಂತೆ ಕೋಟೆಯನ್ನು ಮುತ್ತಿದರು. ಆದನ್ನು ಕಂಡು ಚಂಡಶಾಸನನೂ, ಚಂಡಶಾಸನನನ್ನು ಕಂಡು ವಸುಷೇಣನೂ, ಒಬ್ಬರನ್ನೊಬ್ಬರು ಆಕ್ರಮಿ ಸಲು ಪ್ರಯತ್ನಿಸಿದರು. ವಸುಷೇಣನ ಈ ಪ್ರಯತ್ನವನ್ನು ಕಂಡು ಕತ್ತಲಾಯಿತೆಂದು ಎಚ್ಚರಿಕೆಯನ್ನು ಕೊಟ್ಟು ಅವನ ಕಡೆಯವರು ಅವನನ್ನು ತಡೆದರು. ಆಗ ಎರಡು ಕಡೆಯವರೂ ಯುದ್ಧವನ್ನು ನಿಲ್ಲಿ ಸುವ ವಾದ್ಯಗಳನ್ನು ಬಾರಿಸಿದರು. ವಸುಷೇಣನು ತನ್ನ ಬೀಡಾರವನ್ನು ಹೊಕ್ಕನು. ಇತ್ತ ಚಂಡಶಾಸನನು ಗಂಡನ ವಿರಹ ವ್ಯಥೆಯಿಂದ ಬಾಡಿಹೋದ ಸುನಂದೆ ಇದ್ದ ಉಪ್ಪರಿಗೆಗೆ ಬಂದನು. ತನ್ನ ಜತೆಯಲ್ಲಿ ದ್ದವರನೆಲ್ಲ ಕಳುಹಿಸಿಕೊಟ್ಟು ಆ ಬಳಿಕ ಸುನಂದೆಗೆ ಚಂಡಶಾಸನನು ಈ ರೀತಿ ನುಡಿದನು. "ಕಮಲಾಕ್ಷಿ, ನಿನ್ನ ಒಪ್ಪಿಗೆಯನ್ನು ಪಡೆಯದೆ ನಿನ್ನಲ್ಲಿರುವ ಆಸೆಯಿಂದ ನಿನ್ನನ್ನು ನಾನು ಇಲ್ಲಿಗೆ ತಂದ ಒಂದು ಸಲಿಗೆ ಯನ್ನು ಮನ್ನಿಸು. ಕಾಮಿ ಕಣ್ಣರಿಯುವುದಿಲ್ಲವಷ್ಟೆ. ನಾನು ನಿನಗೆ ತೊತ್ತಾಗಿದ್ದೇನೆ. ನನ್ನ ರಾಣೀವಾಸವು ನಿನಗೆ ಸೇವಕರು. ಈ ಸಾಮ್ರಾ ಜ್ಯಲಕ್ಷ್ಮಿಯ ವೈಭವದಿಂದ ಕೂಡಿದವಳಾಗಿ, ನನಗೆ ವಲ್ಲಭೆಯಾಗಿ ನೀನಿರು." ಅವನ ಮಾತನ್ನು ಕೇಳುತ್ತಲೇ ಸುನಂದೆ ತುಪ್ಪದ ಆಹುತಿ ಯನ್ನು ಹೊಡೆಯಲು ಮೇಲಕ್ಕೆ ಏಳುವ ಅಗ್ನಿಯಂತೆ ಕೋಪಗೊಂಡಳು. "ನಾನು ಸೆರೆ ಸಿಕ್ಕಿದ್ದೇನೆ. ನಾನೊಬ್ಬ ಪರದೇಶಿ. ಭೋಗ, ಉಪ ಭೋಗಗಳನ್ನು ಮರೆತೂ ಕಾಣದ ಅನಾಥೆ, ಎಂದು ತಿಳಿದು ಅಂತಹ ವಳ ವಿಷಯದಲ್ಲಿ ನುಡಿಯುವಂತೆ ನೀನು ನುಡಿಯುತ್ತಿರುವೆ. ಜಾರನೇ,

ನಿನ್ನ ತಲೆ ಈ ಸೆರೆಮನೆಯ ದ್ವಾರದಲ್ಲಿ ಮೆರೆಯುವಾಗ ನೀನು ಈ ಮಾತನ್ನಾಡು. ನಿನಗೆ ಮಾಡುವ ಸತ್ಕಾರವೇ ಅದು". ಸುನಂದೆಯ ಮಾತಿನಿಂದ ಚಂಡಶಾಸನನು ಧೈರ್ಯಗುಂದಲಿಲ್ಲ. ಅವನು ಮತ್ತೆ ನುಡಿದನು. "ವಸುಷೇಣನಲ್ಲಿದ್ದ ಸ್ನೇಹವನ್ನು ಕೆಡಿಸಿಕೊಂಡು ನಾನು ಅವನಿಗೆ ಶತ್ರುವಾದೆ. ವಸುಷೇಣನು ಸತ್ತುಹೋದನು. ಆ ಮಾತನ್ನು ನೀನು ನಂಬು. ವ್ಯರ್ಥವಾದ ಆಸೆಯಿಂದ ನುಡಿಯಬೇಡ. ನನ್ನಲ್ಲಿ ಕೋಪವನ್ನಿಟ್ಟುಕೊಳ್ಳಬೇಡ. ವಸುಷೇಣನು ಸತ್ತುದಕ್ಕಾಗಿ ಅವನೊಡನೆ ಸತ್ತು ನಿನ್ನ ಮಹಿಮೆಯನ್ನು ಲೋಕದಲ್ಲಿ ಪ್ರಕಟಿಸುವುದು ಹಾಗಿರಲಿ. ಪಾತಿವ್ರತ್ಯಕ್ಕೆ ಎಡೆಗೊಟ್ಟು ಈ ಲೋಕದ, ಪರಲೋಕದ ಸೌಖ್ಯವನ್ನು ಕಳೆದುಕೊಳ್ಳಬೇಡ". ಆ ಮಾತಿಗೆ ಸುನಂದೆ ಮತ್ತೆ ನುಡಿದಳು "ಮಾವಿನ ಕೊಂಬೆಯಲ್ಲಿ ನಲಿದ ಕೋಗಿಲೆ ಬೇವಿನ ಕೊಂಬೆಯಲ್ಲಿ ನಲಿಯುತ್ತದೆಯೇ? ಪ್ರಿಯನು ಇದ್ದ ಹಾಗೆ ಸತಿಯರು ಅಪ್ರಿಯರನ್ನು ಸಂಭಾವಿಸುತ್ತಾರೆಯೆ? ವಸುಷೇಣನು ನನ್ನ ಒಡಲಿಗೂ, ಚಿತಾಗ್ನಿಗೂ, ಒಡೆಯನಾಗಿದ್ದಾನೆ. ಇದುವರೆಗೂ ಪತಿವ್ರತೆ ಎಂದು ಹೆಸರುಗೊಂಡ ನಾನು ಅದಕ್ಕೆ ಕಳಂಕ ತರಲೆ?"

ಎಷ್ಟು ವಿಧವಾಗಿ ಪ್ರಾರ್ಥಿಸಿಕೊಂಡರೂ ಸುನಂದೆ ತನ್ನ ಪ್ರಾರ್ಥನೆಯನ್ನು ಮನ್ನಿಸದಿರುವುದನ್ನು ಕಂಡು ಕೊನೆಯದಾಗಿ ಅವನು ಈ ರೀತಿ ಹೇಳಿದನು. "ನಾನು ನಿನ್ನನ್ನು ಬಿಡುವುದಿಲ್ಲ. ನೀನು ಸತ್ತರೆ ನಾನೂ ಸಾಯುತ್ತೇನೆ. ನೀನು ಒಲಿದರೇನಾಯಿತು, ಬಿಟ್ಟರೇನಾಯಿತು? ನಿನ್ನನ್ನೇ ನಾನು ಪ್ರೀತಿಸಿದ್ದೇನೆ. ಇದರಲ್ಲಿ ಎರಡಿಲ್ಲ. ಬೇರೊಂದು ಹೆಣ್ಣಿಗೆ ನಾನು ಬಾಯಿ ಬಿಡಲಾರೆ. ನೀನು ನನ್ನ ಮನೆಯಲ್ಲಿ ಸೆರೆಯಿರುವೆ ಎಂಬ ಒಂದು ಸಮಾಧಾನವೇ ಸಾಕು. ಇದರ ಮೇಲೆ ಯುದ್ಧದಿಂದ ಆಗುವುದು ಆಗಲಿ". ಇಷ್ಟನ್ನು ನುಡಿದು ಚಂಡಶಾಸನನು ಸುನಂದೆಯನ್ನು ಚೆನ್ನಾಗಿ ತಿಳಿದಿದ್ದ ಅರುಣಿಕೆ ಎಂಬುವಳನ್ನು ಕುರಿತು ಸುನಂದೆ ಎಂಬವಳಿಗೆ ಸ್ವಲ್ಪ ಬೆದರಿಕೆಯನ್ನು ತೋರಿಸಿ ಆಕೆ ತನ್ನ ಗಂಡನನ್ನು ಬಿಟ್ಟು ತನ್ನನ್ನು ಒಲಿಯುವಂತೆ ಮಾಡಬೇಕೆಂದು ಹೇಳಿ ಹೊರ

ಟುಹೋದನು. ಆದರೆ ಆ ಕಿತವನು ತನ್ನ ಪ್ರಯತ್ನವನ್ನು ಅಷ್ಟಕ್ಕೇ ನಿಲ್ಲಿಸಲಿಲ್ಲ. ವಸುಷೇಣನು ಇರುವವರೆಗೂ ಸುನಂದೆ ತನ್ನ ವಶಳಾಗ ಳೆಂದು ತಿಳಿದು 'ಶತ್ರು ಸೈನ್ಯ ನಾಶವಾಯಿತು. ವಸುಷೇಣನು ಸತ್ತನು' ಎಂಬ ಒಂದು ಸಮಾಚಾರವನ್ನು ಚಂಡಶಾಸನನು ಹಬ್ಬಿಸಿದನು. ಆ ಬಳಿಕ ವಸುಷೇಣನು ಮಾಯದ ತಲೆಯೊಂದನ್ನು ತಂದು ಅವಳ ಎದು ರಿಗೆ ಈಡಾಡಿ 'ವಸುಷೇಣನೇ ನನಗೆ ಗಂಡನೆಂದು ಸಿಡಿದು ಬೀಳುತ್ತೀ ಅಲ್ಲವೇ? ನೀನು ಮಾಡುವ ಉಪಚಾರವನ್ನು ಈ ತಲೆಗೆ ಮಾಡು' ಎಂದನು. ವಸುಷೇಣನು ಬಯಸಿದುದಕ್ಕಿಂತ ವಿಪರೀತವಾದ ಪರಿಣಾಮ ಅದರಿಂದ ಸುನಂದೆಯ ಮೇಲೆ ಉಂಟಾಯಿತು. ತನ್ನನ್ನು ಸುನಂದೆ ಒಲಿಯುವಳೆಂದು ವಸುಷೇಣನು ತಿಳಿದಿದ್ದನು. ಆದರೆ ತನ್ನ ಮುಂದಿದ್ದ ಮಾಯಾ ಶಿರಸ್ಸಿನ ಅಲಂಕಾರವನ್ನು ನೋಡಿದೊಡನೆಯೇ ಸುನಂದೆಯ ಪ್ರಾಣ ಹೊರಟು ಹೋಯಿತು.

ಇದನ್ನು ಕಂಡು ಚಂಡಶಾಸನನಿಗೆ ಆಶ್ಚರ್ಯಉಂಟಾಯಿತು. ತಾನೊಂದನ್ನು ಮಾಡಹೋದರೆ ವಿಧಿ ಮನ್ಮಥನೊಡನೆ ಪಾಲುಗೊಂಡು ತನ್ನನ್ನು ಹಾಳುಮಾಡಿದನೆಂದು ಮೂರ್ಛೆಹೋದನು. ಉಪಚಾರದಿಂದ ಎಚ್ಚೆತ್ತಮೇಲೆ ಸುನಂದೆಯೊಡನೆ ತಾನು ಸಾಯುವೆನೆಂದು ನಿರ್ಧರಿಸಿ ದನು. ಅವನಿಗೆ ಓಲಗಶಾಲೆ ಬೇಕಾಗಲಿಲ್ಲ. ಸುನಂದೆಯೊಡನೆ ತಾನು ಪ್ರಾಣತ್ಯಾಗ ಮಾಡುವೆನೆಂದೂ ತನ್ನನ್ನು ಅನುಸರಿಸಿ ಬರತಕ್ಕವರು ಬರಬಹುದೆಂದೂ ಸಾರಿಸಿದನು. ಸುನಂದೆಯ ಸಂಸ್ಕಾರಕ್ಕೆ ಎಲ್ಲವೂ ಸಿದ್ಧವಾಯಿತು. ಚಂಡಶಾಸನನು ಅವಳೊಡನೆ ಒಂದೇ ಆಸನದಲ್ಲಿ ಕುಳಿತು ಅಗ್ನಿಪ್ರವೇಶಮಾಡಲು ನಿಶ್ಚಯಿಸಿದನು. ಕೋಟೆಯ ಒಳಗಡೆ ಈ ದೃಶ್ಯ ಅದ್ಭುತವೂ, ರೌದ್ರವೂ, ಕರುಣಾಜನಕವೂ, ಆಗಿ ತೋರಿಬಂತು.

ಇತ್ತ ವಸುಷೇಣನು ಚಂಡಶಾಸನನಿದ್ದ ಕೋಟೆಗೆ ಧಾಳಿ ಮಾಡಲು ಏರ್ಪಾಟು ಮಾಡಿದನು. ಆನೆ ಕುದುರೆಗಳನ್ನು ಸಿದ್ಧಪಡಿ ಸಿದನು. ಭಟರನ್ನು ಆಯುಧ ಹಿಡಿಯುವಂತೆ ನೇಮಿಸಿದನು. ಅಷ್ಟ ರಲ್ಲಿಯೇ ಕೋಟೆಯಿಂದ ಸ್ತ್ರೀಯರ ಪ್ರಲಾಪ ಕೇಳಿ ಬಂತು. ಇದನ್ನು

ಕೇಳಿ ವಸುಷೇಣನಿಗೆ ಆಶ್ಚರ್ಯ ಉಂಟಾಯಿತು. ಅಷ್ಟರಲ್ಲಿಯೇ ಚಾರ ನೊಬ್ಬನು ಬಂದು ಕೋಟಿಯ ಸಮಾಚಾರ ಹೇಳಿದೊಡನೆಯೇ ಅದನ್ನು ಕೇಳಿ ವಸುಷೇಣನು ಚಿತ್ರದಲ್ಲಿ ಬರೆದ ಬೊಂಬೆಯಂತೆ ಮೂಕನಾದನು, ಮೂರ್ಛೆಗೊಂಡನು. ಅವನು ಬೇಗ ಎಚ್ಚತ್ತು ಬಯಲಿನಲ್ಲಿಯೇ ಮಾತ ನಾಡುತ್ತ "ನಾನು ಸತ್ತನೆಂದು ಚಂಡಶಾಸನನು ಸುಳ್ಳು ನುಡಿದರೆ ಅದನ್ನೇ ನಂಬಿ ನೀನು ಸತ್ತೆ. ನಾನಾದರೋ ನಿನ್ನ ಸಾವನ್ನು ಕಂಡು ಇನ್ನೂ ಬದುಕಿದ್ದೇನೆ. ನನಗಿಂತಲೂ ನಾಚಿಕೆ ಇಲ್ಲದವರೂ ದೀನರೂ ಕೃಪಣರೂ ಇನ್ನಾರಿದ್ದಾರೆ" ಎಂದು ಹಂಬಲಿಸಿದನು. ಆ ಬಳಿಕ ತನ್ನನ್ನು ಹಿಡಿದುಕೊಂಡಿದ್ದ ಸಾಮಂತರಾಜನಲ್ಲಿ ಈ ರೀತಿ ನುಡಿದನು. "ನನ್ನ ಪ್ರಿಯೆ ಹೋದಮೇಲೆ ನಾನು ಬದುಕುವುದೆಂದರೆ ಗೊಂಬೆ ಇಲ್ಲದ ಕಣ್ಣಿನಂತೆ, ಸುಗಂಧವಿಲ್ಲದ ಹೂವಿನಂತೆ, ನೀರೆಲ್ಲಾ ಹೋದ ಕೆರೆ ಯಂತೆ, ನಾನು ಬದುಕಿರತಕ್ಕ ಹೆಣದಂತಾಗಿದ್ದೇನೆ. ದೈನ್ಯಕ್ಕೆ ಗುರಿಯಾಗಿ ಬದುಕುವುದು ಸಲ್ಲದು. ನಾವು ಇದ್ದರೇನು ಬಿದ್ದರೇನು? ಎಲ್ಲ ಪ್ರಯತ್ನದಿಂದಲೂ ಹೆಂಡತಿಯನ್ನು ರಕ್ಷಿಸಿಕೊಳ್ಳ ಬೇಕು. ಆ ಪ್ರಾಣೇಶ್ವರಿ ಇಲ್ಲದ ಮೇಲೆ ಈ ಕೋಟಿ ಈ ಕತ್ತಿ ಇವು ಗಳೆಲ್ಲ ಏಕೆ? ಶತ್ರು ಸತ್ತಮೇಲೆ ಉತ್ಸಾಹಗೊಂಡು ಯಾರೊಡನೆ ಯುದ್ಧ ಮಾಡುವುದು? ನನ್ನ ಹೆಂಡತಿಯ ವಿಷಯದಲ್ಲಿ ಕೋಪವ ನ್ನುಂಟುಮಾಡಿದವನ ತಲೆಯನ್ನು ತೆಗೆಯದೆ ಇರುವ ಕತ್ತಿ ಹಾಳೂರಿನ ಕ್ಷುದ್ರದೇವತೆಯ ಕೈಯಲ್ಲಿರುವ ಕತ್ತಿಯಂತೆ."

ಹೀಗೆಂದುಕೊಂಡು ಲಗ್ಗೆಮಾಡಲು ಸಿದ್ಧವಾಗಿದ್ದ ಸೈನ್ಯಕ್ಕೆ ಹಿಮ್ಮೆ ಟ್ಟುವಂತೆ ಹೇಳಿ ವೈರಾಗ್ಯಪರನಾಗಿಅವನು ತನ್ನ ರಾಜ್ಯವನ್ನು ಹೊಕ್ಕನು. ಆ ಬಳಿಕ ಪಟ್ಟವನ್ನು ಮಗನಿಗೆ ಕಟ್ಟಿ ತಪಸ್ಸನ್ನು ಆಚರಿಸಿ ದೇಹವನ್ನು ಬಿಟ್ಟು ತಾನು ಮಾಡಿದ ತಪಸ್ಸಿನ ಫಲವಾಗಿ ವಸುಷೇಣನು ಸಹಸ್ರಾರು ಕಲ್ಪದಲ್ಲಿ ದೇವನಾಗಿ ಹುಟ್ಟಿದನು.

## ೩ ವಿಮರ್ಶೆ

ಚಂಡಶಾಸನನ ಕಥೆ ಜನ್ನನು ರಚಿಸಿರುವ ಅನಂತನಾಥ ಪುರಾ

ಣದ ಒಂದು ಅಂಗವಾಗಿ ಬರುತ್ತದೆ. ಒಂದು ದೃಷ್ಟಿಯಿಂದ ನೋಡಿದರೆ ಪುರಾಣದ ಕಥೆಗೂ ಈ ಕಥೆಗೂ ಯಾವ ಸಂಬಂಧವೂ ಇಲ್ಲ. ಆದರೂ ಜನ್ನನು ತನ್ನ ಇಳಿವಯಸ್ಸಿನಲ್ಲಿಯೂ ಕೂಡ ಈ ಕಥೆಯನ್ನು ಮೆಚ್ಚಿ ಏಕೆ ಪ್ರಸ್ತಾಪಿಸಿದನೊ ತಿಳಿಯದು. ಈ ಕಥೆಯನ್ನೂ ಯಶೋಧರ ಚರಿತ್ರೆಯನ್ನೂ ಹೋಲಿಸಿದರೆ ಕಥಾವಸ್ತುವಿನ ಆಯ್ಕೆಯಲ್ಲಿ ತುಂಬ ಹೋಲಿಕೆ ಇರುವುದು ಕಂಡು ಬರುತ್ತದೆ. ಯಶೋಧರ ಚರಿತ್ರೆಯಲ್ಲಿ ಹೆಣ್ಣಿನಿಂದ ಗಂಡಿಗೆ ಅನ್ಯಾಯವಾಗಿದೆ. ಕವಿ ಅಮೃತಮತಿಯ ವರ್ತನೆಯನ್ನು ಕಂಡು "ಆ ಸ್ತ್ರೀಚರಿತವುದೇಂ ಕಳೆಯಲರಿದು ಪೆಂಡಿರ ಕೃತಕಂ" ಎಂದು ಉದ್ಗಾರ ತೆಗೆದಿದ್ದಾನೆ. ಚಂಡಶಾಸನನ ಕಥೆಯಲ್ಲಾದರೊ ಗಂಡಿನಿಂದ ಹೆಣ್ಣಿಗೆ ಅನ್ಯಾಯವಾಗಿದೆ. ಈ ಅಂಶವನ್ನು ಪರಿಗಣಿಸಿದರೆ ಈ ಎರಡು ಕಥೆಗಳಿಗೂ ಸಾಮ್ಯವಿರಬೇಕೆಂದು ತೋರುತ್ತದೆ. ಹೌದು; ಸಾಮ್ಯಗಳುಂಟು; ವೈಷಮ್ಯಗಳೂ ಉಂಟು. ವಸುಷೇಣ ಯಶೋಧರರಿಬ್ಬರಿರೂ ಅವರಿಗೆ ಭೋಗವನ್ನನುಭವಿಸುವುದಕ್ಕೆ ಯಾವ ವಿಧವಾದ ತೊಂದರೆಯಾಗಲೀ ಇರಲಿಲ್ಲ. ಯಶೋಧರನ ಕೈಹಿಡಿದ ಮಡದಿಯಾದ ಅಮೃತಮತಿಯಾದರೊ ಸುರಸುಂದರಿಯಂತಿದ್ದಳು. ಯಶೋಧರನಿಗೆ ಒಬ್ಬಳೇ ಹೆಂಡತಿಯಾದರೆ ವಸುಷೇಣನಿಗೆ ಸುರಸುಂದರಿಯರಿಗೆ ಸಮಾನರಾದ ಐನೂರು ಜನ ಸ್ತ್ರೀಯರಲ್ಲಿ ಸುನಂದೆಯೇ ಮೆಚ್ಚಿನ ಮಡದಿ. ಹೀಗಿದ್ದರೂ ವಿಧಿ ಮಾತ್ರ ಇವರಿಬ್ಬರ ಬಾಳನ್ನು ನೋಡಿ ಸಹಿಸಲಿಲ್ಲ. ಕರುಬಿತೆಂದೇ ಹೇಳಬೇಕು. ತುಂಬು ಬೆಳದಿಂಗಳಿನ ರಾತ್ರಿಯಲ್ಲಿ ಎಲ್ಲೆಲ್ಲಿಯೂ ನಿಶ್ಶಬ್ಧತೆ ಇದ್ದಾಗ ಮೆಚ್ಚಿನ ನಲ್ಲನು ತೊಡೆದು ಮೇಲಿದ್ದಂತೆಯೇ ಅವಿಚಾರಿಯಾಗಿ ಮಾವಟಿಗನ ಗಾನಕ್ಕೆ ಮನಸೋತು ತನ್ನ ಮನಸ್ಸನ್ನೇ ಅವನಿಗೆ ಒಪ್ಪಿಸಿದಳು. ಚಂಡಶಾಸನನು ಬಲೆಬಿದ್ದ ಸನ್ನಿವೇಶವೂ ಸ್ವಲ್ಪ ಹೆಚ್ಚು ಕಡಿಮೆ ಇದೇ ರೀತಿಯದ್ದಾಗಿದೆ. ವಸುಷೇಣನ ಗೆಳೆಯನಾಗಿ ಅತಿಥಿಯಾಗಿ ಬಂದು ಅವನಿಂದ ಉಪಚಾರವನ್ನು ಕೊಂಡು ಅವನ ಹೆಂಡತಿಗೆ ಮರುಳಾಗಿ ಅವಳನ್ನು ಹೊತ್ತುಕೊಂಡು ಹೋದದ್ದು ಅಕ್ಷಮ್ಯವಾದ ಅಪರಾಧ. ಹೀಗೆಂದ ಮಾತ್ರದಿಂದ ಅಷ್ಟವಂಕನು ಮಾಡಿದ ಕಾರ್ಯವನ್ನು

ಸಮರ್ಥನೆ ಮಾಡಿತೆಂದು ಭಾವಿಸಲುಗದು. ಇಬ್ಬರದೂ ಪಾಪ ಕಾರ್ಯವೇ. ಆದರೆ ಕವಿ ಸ್ಪಷ್ಟವಾಗಿ ಹೇಳದಿದ್ದರೂ ರಾಣಿಯ ಬೇಡಿಕೆಗೆ ಅಷ್ಟವಂಕನು ಮೊದಲು ಒಪ್ಪಿರಲಾರನು. ಆ ಬಳಿಕ ಅವನು ಹೆದರಿ ಒಪ್ಪ ಬೇಕು. ಮೇಲಾಗಿ ಅಮೃತಮತಿ ಯಶೋಧರ ಅಷ್ಟವಂಕರ ಸಂಬಂಧ ಸ್ವಾಮಿಭೃತ್ಯರ ಸಂಬಂಧ. ಅಷ್ಟವಂಕನು ಸ್ವಾಮಿಗೂ, ಸ್ವಾಮಿಯ ಹೆಂಡತಿಗೂ ದ್ರೋಹ ಬಗೆದನು. ಚಂಡಶಾಸನನಾದರೊ ಸೋದರನೂ ಸ್ನೇಹಿತನೂ ಆದ ವಸುಷೇಣನಿಗೆ ನಿರ್ಭಯವಾಗಿ ಯಾವ ಹೆದರಿಕೆಯೂ ಇಲ್ಲದೆ ದ್ರೋಹ ಬಗೆದನು. ಅಷ್ಟವಂಕ ಚಂಡಶಾಸನರ ಅಪರಾಧದಲ್ಲಿ ಚಂಡಶಾಸನನದೇ ಒಂದು ಕೈ ಮೇಲೆಂದು ತೋರುತ್ತದೆ. ಅಮೃತಮತಿ ಅಷ್ಟವಂಕನ ಗಾನವನ್ನು ಮೆಚ್ಚಿಕೊಂಡು, ತನ್ನ ಉಪಪತಿಯಾಗು ವವನ ಬಳಿ ದೂತಿಯನ್ನಟ್ಟಿದಾಗ ಅವಳು ಮಾವಟಿಗನ ರೂಪವನ್ನು ಕಂಡು 'ಕಣ್ಣಂ ಮನಕ್ಕಂ ಉದ್ಗಾರವೆತ್ತು' ಅಮೃತಮತಿಯಲ್ಲಿಗೆ ಬಂದು ಅವಳನ್ನು ಆ ಪಾಪದ ದಾರಿಯಿಂದ ತಿರುಗಿಸಲು ಪ್ರಯತ್ನಿಸಿದಳು. ಆದರೆ ಅದು ಸಾಧ್ಯವಾಗಲಿಲ್ಲ. ಚಂಡಾಶಾಸನನ ಸೇವಕನಾದರೋ ಸುನಂದೆ, ಚಂಡಶಾಸನನನ್ನು ಪ್ರೀತಿಸಿರುವಳೆಂದೇ ಅವನಿಗೆ ನಂಬಿಕೆಯನ್ನುಂಟುಮಾಡಿ ಮರುಳಿಗೆ ಧೂಪವನ್ನೆತ್ತುವಂತೆ ಅವನ ಕಾಮಾಗ್ನಿಯನ್ನು ಕೆರಳಿಸಿದನು. ಅಮೃತಿಮತಿ ತನ್ನ ಪ್ರಣಯಕ್ಕೆ ಯಶೋಧರನಿಂದ ಅಡ್ಡಿಯೆಂದು ತಿಳಿದಾಗ ಅವನನ್ನು ವಿಷಾನ್ನದ ಮೂಲಕ ಅಪಹರಿಸಿದಳು. ಚಂಡಾಶಾಸನನು ವಂಚನೆ, ಮೋಸ, ಮಿತ್ರ ದ್ರೋಹ ಮುಂತಾದ ಪಾಪಕೃತ್ಯಗಳನ್ನು ಎಸಗಿದನು. ಅಮೃತಮತಿಯ ಬೇಡಿಕೆಗೆ ಅಷ್ಟವಂಕನು ಹೂಗುಟ್ಟಿದನು. ಅವನು ಕೊಳೆತು ನಾರುತ್ತಿದ್ದರೂ ಅವನ ಸಹವಾಸದಿಂದ ಅಮೃತಮತಿಗೆ ತೊನ್ನುವುಂಟಾದರೂ ರಾಣಿ ಅವನನ್ನು ಬಿಡಲಿಲ್ಲ. ಸುನಂದೆ ಚಂಡಶಾಸನನ ಬೇಡಿಕೆಗೆ ಒಪ್ಪದಿದ್ದರೂ ಲೋಕವಿರುದ್ಧವಾಗಿ ಚಂಡಶಾಸನನು ಅವಳೊಡನೆ ಸಹಗಮನ ಮಾಡಿದನು. ಈ ಇಬ್ಬರ ಹುಚ್ಚೂ ನಮ್ಮ ಮೆಚ್ಚಿಗೆಗೆ ಅರ್ಹವಾದುದಲ್ಲವೇ ? ಈ ಇಬ್ಬರದೂ ಲೋಕನಿಂದ್ಯವಾದ, ಗೃಹಸ್ಥಧರ್ಮವನ್ನು ಮುರಿಯುವ ಅಕ್ರಮವಾದ ಪ್ರಣಯಪ್ರಸಂಗ. ಈ ಎರಡು

ಪ್ರಣಯ ಪ್ರಸಂಗಗಳಲ್ಲಿ ಯಶೋಧರ ಚರಿತ್ರೆಯ ಪ್ರಣಯ ಪ್ರಸಂಗ ಹೆಚ್ಚು ಉಜ್ವಲವಾಗಿ ಚಿತ್ರಿತವಾಗಿದೆ. ಏಕೆಂದರೆ ಕವಿ ಈಕಾವ್ಯವನ್ನು ತನ್ನ ಎಳೆಹರಯದಲ್ಲಿ ಬರೆದನು. ಆ ಉಜ್ವಲತೆ ಇಳಿವಯಸ್ಸಿನಲ್ಲಿ ಬರೆದ ಚಂಡಶಾಸನನ ಕಥೆಯಲ್ಲಿ ಇಲ್ಲದಿದ್ದರೂ, ಈ ಕಥೆಯೇ ಇನ್ನೊಂದು ಕಥೆಗಿಂತ ಹೆಚ್ಚು ನೈಸರ್ಗಿಕವಾಗಿದೆಯೆಂದು ಒಪ್ಪಿಕೊಳ್ಳಬೇಕು.

ಈ ಎರಡು ಕಥೆಗಳಲ್ಲಿಯೂ ಚಂಡಶಾಸನ ಅಮೃತಮತಿಯರ ಪ್ರಣಯ ಪ್ರಸಂಗಕ್ಕೆ, ಅವರನ್ನು ಮುಸುಕಿದ ಮನಸಿಜನ ಮಾಯೆಗೆ ವಿಧಿ ತನ್ನ ಬೆಂಬಲವನ್ನು ನೀಡಿ ಅಗಾಧವಾದ ನಷ್ಟವನ್ನುಂಟುಮಾಡುತ್ತದೆ. ಯಶೋಧರ ಚರಿತೆಯಲ್ಲಿ ಕಂಡು ಬರುವ ವಿಧಿಯ ಕೈವಾಡವನ್ನು ಇನ್ನೊಂದು ಗ್ರಂಥದಲ್ಲಿ ವಿಸ್ತಾರವಾಗಿ ಚರ್ಚಿಸಿದೆ. ಈ ಗ್ರಂಥದಲ್ಲಿ ವಿಧಿಯ ಕೈವಾಡವನ್ನು ಕುರಿತು ಒಂದೆರಡು ಮಾತುಗಳನ್ನಾಡಬಹುದು. ಭೋಜನ ಪಂಕ್ತಿಯಲ್ಲಿ ಕುಳಿತು ಬಡಿಸುತ್ತಿದ್ದ ಸುನಂದೆಯನ್ನು ಕಂಡು ಮೋಹಗೊಂಡಿದ್ದು ಮನಸಿಜನ ಮಾಯೆಯಾದರೂ ವಿಧಿಯ ಸಂಚು. ಸುನಂದೆಗೆ ಭಯ ತೋರಿಸಿ ಅವಳನ್ನು ಕೂಡುವೆನೆಂದುಕೊಂಡಿದ್ದ ಚಂಡಶಾಸನನಿಗೆ ವಸುಷೇಣನ ಮಾಯದ ತಲೆಯನ್ನು ನೋಡಿದೊಡನೆಯೇ ಸುನಂದೆ ಸಾಯಬೇಕೇ? ಚಂಡಶಾಸನನು ಒಂದನ್ನು ಎಣಿಸಿದರೆ ದೈವ ತಾ ಬೇರೊಂದ ನೆನೆದುದು. ವಸುಷೇಣನು ಲಗ್ಗೆ ಮಾಡಲು ಚಂಡಶಾಸನನ ಕೋಟೆಯ ಬಳಿಗೆ ಬಂದಾಗ ಸುನಂದೆಯ ಅವತಾರ ಪೂರ್ತಿಯಾಗಿತ್ತು. ಹೀಗೆ ವಿಧಿ ಮನಸ್ಸನ್ನು ಅಪಹರಿಸುವ ಸನ್ನಿವೇಶಗಳನ್ನು ಕಲ್ಪಿಸಿ, ಈ ಕಾಮಿಗಳು ಕುಲಪದವಿಗಳನ್ನು ನೋಡದಂತೆ, ತಮ್ಮ ಮನಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳಲು ಸಾಧ್ಯವಾಗದಂತೆ, ಮಾಡಿ ಅವರನ್ನು ಪಾಪಕೂಪಕ್ಕೆ ತಳ್ಳಿತು. ಈ ಅಂಶಗಳನ್ನು ಅವಲೋಕಿಸಿದರೆ ಮನುಷ್ಯನ ನಿಸ್ಸಹಾಯ ಸ್ಥಿತಿ ಮನದಟ್ಟಾಗುತ್ತದೆ. ಅವನು ಈ ಕಾಮದ ಬಿರುಗಾಳಿಗೆ ಸಿಲುಕಿದರೆ ತರಗೆಲೆಯಂತಾಗುತ್ತಾನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಈ ಎರಡು ಕಥೆಗಳೂ ಪ್ರಣಯದ ಒಂದೇ ಮುಖಗಳಂತೆ ತೋರಿದರೂ, ಈ ಎರಡಕ್ಕೂ ಸಾಮ್ಯ ವೈಷಮ್ಯಗಳಿರುವುವೆಂಬುದನ್ನು ತೋರಿಸಿದ್ದಾಯಿತು. ಸುನಂದೆಯನ್ನು ಚಂಡಶಾಸನನು ಹೊತ್ತುಕೊಂಡು ಹೋಗುವುದರಲ್ಲಿಯೂ, ಅವಳಿಗೆ ಮಾಯದ ತಲೆಯನ್ನು ತೋರಿಸುವುದರಲ್ಲಿಯೂ, ರಾಮಾಯಣಕ್ಕೂ ಈ ಕಥೆಗೂ ಸಾಮ್ಯವುಂಟು. ಈ ಸಂದರ್ಭವನ್ನು ಓದುತ್ತಿದ್ದಾಗ ನಾಗಚಂದ್ರನ ವಾಣಿಯ ಘೋಷ ಅಲ್ಲಲ್ಲಿ ಕೇಳಿ ಬರುತ್ತದೆ. ಇದಕ್ಕಿಂತಲೂ ಮಿಂಚಿದ ವಿಷಯಗಳನ್ನು ಗ್ರಂಥವನ್ನು ಓದಿಯೇ ತಿಳಿದುಕೊಳ್ಳಬೇಕು.

## ಕೆಲವು ಟಿಪ್ಪಣಿಗಳು

ಪದ್ಯ ೧—ಮೇರುವಿನರ್ಧವುಂ ಇತ್ಯಾದಿ— Our earth is an immense circular body consisting of a number of concentric rings called islands, (dvipas) seperated from each other by ring-shaped occeans. In the centre stands Mount Meru. Around this at its foot runs the first continent Jumbu-dvipa. This is surrounded by the Lavana-Samudra, or the Salt Sea. Out lines of Jainim by J. Jaini. pages 122-22.

ಪದ್ಯ ೨. ಆದಿತೀರ್ಥಂಕರನಾದ ಪುರುದೇವನ ಹಿರಿಯ ಮಗನೇ ಭರತ. ಬಾಹುಬಲಿಯೇ ಮೊದಲಾದ ನೂರುಜನ ಇವನ ತಮ್ಮಂದಿರು. ತನ್ನ ರಾಜ್ಯವನ್ನೆಲ್ಲ ಮಕ್ಕಳಿಗೆ ಹಂಚಿಕೊಟ್ಟು, ವೈರಾಗ್ಯಹೊಂದಿ, ಆದಿನಾಥನು ತೀರ್ಥಂಕರನಾದನು. ತಂದೆಯಿಂದ ತಮಗೆ ಬಂದ ರಾಜ್ಯವನ್ನು ಅನುಭವಿಸುತ್ತ ಮಕ್ಕಳು ಸುಖವಾಗಿದ್ದರು. ಇತ್ತ ಭರತನು ತನ್ನ ಎಲ್ಲ ಸೈನ್ಯದೊಡನೆ ದಿಗ್ವಿಜಯಕ್ಕಾಗಿ ಹೊರಟು ಭೂಮಂಡಲವನ್ನೆಲ್ಲ ಜಯಿಸಿದನು. ಇಷ್ಟಾದರೂ ಭರತನ ತಮ್ಮಂದಿರು ಅಣ್ಣನಿಗೆ ತಲೆಬಾಗಲಿಲ್ಲ. ತನಗೆ ಅಧೀನರಾಗಬೇಕೆಂದು ಭರತನು ಅವರಿಗೆ ದೂತರನ್ನಟ್ಟಿದನು. ಅವನ ತಮ್ಮಂದಿರಿಗಾದರೊ ಅಣ್ಣನನ್ನು ಇದಿರಿಸಲು ಶಕ್ತಿ

ಇರಲಿಲ್ಲ; ಅಧೀನರಾಗಲು ಇಷ್ಟವಿರಲಿಲ್ಲ. ಹೀಗಾಗಿ ಅವರು ರಾಜ್ಯ ವನ್ನು ತೊರೆದು ದೀಕ್ಷೆಯನ್ನು ಕೈಗೊಂಡರು; ತಪಸ್ಸನ್ನು ಆಚರಿಸಿದರು. ಇನ್ನು ಉಳಿದವನು ತಮ್ಮನಾದ ಬಾಹುಬಲಿಯೊಬ್ಬ. ಅವನು ಅಣ್ಣನ ಅಧೀನತೆಯನ್ನು ಒಪ್ಪಿಕೊಳ್ಳಲಿಲ್ಲ, ಆದ್ದರಿಂದ ಭರತನು ಬಹುಬಲಿಯ ಮೇಲೆ ದಂಡೆತ್ತಿ ನಡೆದನು. ಭರತ ಬಾಹುಗಳಿಗೆ ಯುದ್ಧ ಅನಿವಾರ್ಯವೆಂದು ತೋರಿತು. ಯುದ್ಧದಿಂದ ಆಗುತ್ತಿದ್ದ ಸೈನ್ಯದ ನಾಶವನ್ನು ತಪ್ಪಿಸಲು ಅಣ್ಣತಮ್ಮಂದಿರಿಬ್ಬರೇ ಯುದ್ಧಮಾಡಬೇಕೆಂದು ಸಲಹೆ ಕೊಟ್ಟರು. ಹೀಗೆ ನಡೆದ ಯುದ್ಧದಲ್ಲಿ ಭರತನು ಬಾಹುಬಲಿಗೆ ಸೋತನು. ಸೋಲಿನಿಂದ ಅವಮಾನಿತನಾದ ಭರತನು ಬಗೆ ಕದಡಿ ತನ್ನಲ್ಲಿದ್ದ ಚಕ್ರಾಯುಧದಿಂದ ಬಾಹುಬಲಿಯನ್ನು ಹೊಡೆದನು. ಅದು ಬಾಹುಬಲಿಯನ್ನು ಕೊಲ್ಲದೆ ಅವನನ್ನು ಪ್ರದಕ್ಷಿಣೆ ಮಾಡಿ ಅವನ ಬಳಿ ಬಂದು ನಿಂತಿತು. ರಾಜ್ಯದ ಆಸೆಗಾಗಿ ಅಣ್ಣನು ಮಾಡಿದ ಅಕಾರ್ಯವನ್ನು ಕಂಡು ಜಿಗುಪ್ಸೆ ಹೊಂದಿದ ಬಾಹುಬಲಿ ವಿಜಯ ಸಂಪಾದಿಸಿದ ಗಳಿಗೆಯಲ್ಲಿಯೇ ರಾಜ್ಯವನ್ನು ಅಣ್ಣನಿಗೆ ಬಿಟ್ಟುಕೊಟ್ಟು ತಪಸ್ಸಿಗೆ ನಡೆದನು.

ಪದ್ಯ ೮-ನಾಟಕ, ನಾಟಿಕಾ-

ನಾಟಕ-ದಶರೂಪಕಗಳಲ್ಲಿ ಇದೂ ಒಂದು. ಇದರ ವಸ್ತು ಪ್ರಖ್ಯಾತ; ನಾಯಕ ಧೀರೋದಾತ್ತ. ವೀರ, ಶೃಂಗಾರ, (ಕರುಣ ?) ಇವುಗಳಲ್ಲಿ ಯಾವುದಾದರೂ ಒಂದು ಮುಖ್ಯ; ಮಿಕ್ಕವು ಅದಕ್ಕೆ ಪೋಷಕ. (ಕೊನೆಯಲ್ಲಿ ಅದ್ಭುತರಸ) ಮುಖಾದಿ ಸಂಧಿಗಳು ಸಾಂಗವಾಗಿಯೂ ಸ್ಪಷ್ಟವಾಗಿಯೂ ಇರುತ್ತವೆ. ಐದರಿಂದ ಹತ್ತು ಅಂಕಗಳಿರುತ್ತವೆ. (ಕನ್ನಡ ಕೈಪಿಡಿ-ಭಾಗ. ೧.)

ನಾಟಿಕಾ- ಉಪರೂಪಕಗಳಲ್ಲಿ ಇದು ಪ್ರಸಿದ್ಧವಾದದ್ದು. ಇದರ ಲಕ್ಷಣವನ್ನು ಕನ್ನಡ ಕೈಪಿಡಿಯಲ್ಲಿ ಹೀಗೆ ಹೇಳಿದೆ.

'ನಾಟಿಕೆಯಲ್ಲಿ ವಸ್ತುವು ಕಲ್ಪಿತ. ನಾಯಕನು ಪ್ರಖ್ಯಾತನಾದ ಧೀರ ಲಲಿತ; ಅವನ ಹೆಂಡತಿಯು ಜ್ಯೇಷ್ಠೆಯಾಗಿಯೂ, ಪ್ರಗಲ್ಭೆ

ಯಾಗಿಯೂ, ಮಾನವತಿ (ಮಾನಿನಿ. ದಶರೂಪಕ iii, 49) ಯಾಗಿಯೂ ಇರುವಳು; ನಾಯಿಕೆಯು ರಾಜ ವಂಶೀಯಳಾಗಿಯೂ, ಮುಗ್ಧೆ ಯಾಗಿಯೂ ಅಂತಃಪುರದಲ್ಲಿರತಕ್ಕವಳು; ಅಥವಾ ಸಂಗೀತವನ್ನು ಅಭ್ಯಾಸ ಮಾಡುತ್ತಿವವಳಾಗಿಯೂ, ನಾಯಕನಲ್ಲಿ ಹೊಸದಾಗಿ ಅನುರಕ್ತಳಾಗಿಯೂ ಇರುವಳು. ನಾಯಕನು ತನ್ನ ಹೆಂಡತಿಗೆ ಹೆದರುತ್ತ ನಡೆದುಕೊಳ್ಳುವನು. ನಾಯಕ ನಾಯಿಕೆಯರು ಸೇರುವುದು ಆಕೆಯ ಅಧೀನವಾಗಿರುವುದು. ಶೃಂಗಾರ ರಸ; ಕೈಶಿಕೀವೃತ್ತಿ; ಸಾಧಾರಣವಾಗಿ ನಾಲ್ಕು ಅಂಕಗಳು. ವಿಮರ್ಶ ಸಂಧಿ ಮಾತ್ರ ಇಲ್ಲ. ರತ್ನಾವಳೀ ನಾಟಿಕೆಯು ಈ ಜಾತಿಗೆ ಉತ್ತಮವಾದಉದಾಹರಣೆ.'

---

# ನಮ್ಮ ಪ್ರಕಟನೆಗಳು

೧ ಚಂದ್ರಗುಪ್ತವಿಜಯ
೨ ಸಭಾಪರ್ವ ಸಂಗ್ರಹ
೩ ವಿರಾಟಪರ್ವ ಸಂಗ್ರಹ
೪ ಉದ್ಯೋಗಪರ್ವ ಸಂಗ್ರಹ
೫ ರೋಮಿಯೋ ಮತ್ತು ಜೂಲಿಯೆಟ್
೬ ಮೃಚ್ಛಕಟಿಕ ಪ್ರಕರಣ
೭ ವಚನ ಭಾರತ
೮ ಕಥಾಮೃತ
೯ ಭಾಸ ಕವಿ
೧೦ ಭಾಷಣಗಳು ಮತ್ತು ಲೇಖನಗಳು
ಭಾಗ ೧, ೨
೧೧ ಕನ್ನಡ ಧ್ವನ್ಯಾಲೋಕ
೧೨ ಯಶೋಧರನ ಕಥೆ

ವಿವರಗಳಿಗೆ :

**ಎಚ್. ಎಂ. ಶಂಕರನಾರಾಯಣರಾವ್, ಎಂ. ಎ.,**

ಸಂಪಾದಕರು ಮತ್ತು ಪ್ರಕಾಶಕರು

**ಕನ್ನಡ ಕವಿ ಕಾವ್ಯ ಮಾಲೆ**

೭೮ ಕೃಷ್ಣರಾಜವನಂ,

**ಮೈಸೂರು**